ಅಂತರ ಭಾರತೀಯ ಪುಸ್ತಕಮಾಲೆ

# ಬನಗರವಾಡಿ

ವೆಂಕಟೇಶ ಮಾಡಗೂಳಕರ್

ಅನುವಾದ:

ಭಾಸ್ಕರ ಗೋವಿಂದ ಗೋಖಲೆ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಮೊದಲ ಮುದ್ರಣ: 1971 (ಶಕ 1893)
ದ್ವಿತೀಯ ಮುದ್ರಣ: 1990 (ಶಕ 1912)
© ವೆಂಕಟೇಶ ಮಾಡಗುಳಕರ್
© ಕನ್ನಡ ಅನುವಾದ : ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ರೂ. **11.00**

*Original Title in Marathi* : BANAGARWADI
*by* Venkatesh Madgulkar
*Kannada Translation* : BANAGARWADI

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ,
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ 110 016,
ಇವರಿಂದ ಪ್ರಕಟಿತ

# 'ಬನಗರವಾಡಿ' ಮತ್ತು ಸಮಕಾಲೀನ ಮರಾಠಿ ಕಾದಂಬರಿ

ವೆಂಕಟೇಶ ಮಾಡಗೂಳಕರ ಅವರ 'ಬನಗರವಾಡಿ' ಮೊದಲಬಾರಿಗೆ 1954ರಲ್ಲಿ ಮರಾಠಿ ಭಾಷೆಯ ಸಾಪ್ತಾಹಿಕವೊಂದರ ದೀಪಾವಳಿ ವಿಶೇಷಾಂಕದಲ್ಲಿ ಪ್ರಕಟವಾಯಿತು. ಮೂರನೇ ವರ್ಷವೇ ಈ ಕಾದಂಬರಿಯು ಪುಸ್ತಕ ರೂಪವನ್ನು ತಾಳಿ ಓದುಗರ ಮೆಚ್ಚಿಗೆಯನ್ನು ಪಡೆಯಿತು. ಅಂದಿನ ಮರಾಠಿ ಕಾದಂಬರಿಗಳ ಬಗ್ಗೆ ಉತ್ಸಾಹ ಹೀನರಾಗಿದ್ದ ಯುವಕರಿಗೂ ಸಹ ಈ ಕಾದಂಬರಿಯು ಅತ್ಯಂತ ಪ್ರಿಯವಾಯಿತು. 1958ರಲ್ಲಿ "ದಿ ವಿಲೇಜ್ ಹ್ಯಾಸ್ ನೊ ವಾಲ್ಸ್" (The Village has no walls) ಎಂಬ ಶೀರ್ಷಿಕೆಯಲ್ಲಿ ಇದರ ಆಂಗ್ಲಭಾಷಾ ರೂಪಾಂತರ ಹೊರಬಂದಾಗ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಓದುಗರ ಮೆಚ್ಚಿಗೆಗೆ ಪಾತ್ರವಾಯಿತು. ಈ ರೂಪಾಂತರದ ಎರಡನೇ ಆವೃತ್ತಿ ಈಗ ಹೆಚ್ಚುಕಡಿಮೆ ಸಂಪೂರ್ಣವಾಗಿ ಮಾರಾಟವಾಗಿದೆ. ಆಂಗ್ಲ ಭಾಷೆಯಷ್ಟೇ ಅಲ್ಲದೆ ಡೇನಿಷ್ ಭಾಷೆಗೂ ಈ ಕಾದಂಬರಿಯನ್ನು ಅನುವಾದಿಸಲಾಗಿದೆ. ಇಷ್ಟೆ ಅಲ್ಲದೆ "ಎ ಟ್ರೆಷರಿ ಆಫ್ ಏಷ್ಯನ್ ಶಾರ್ಟ್ ಸ್ಟೋರೀಸ್" (A Treasury of Asian Short Stories), "ಟ್ವೆಂಟಿಯತ್ ಸೆಂಚುರಿ ಏಷ್ಯಾ" (Twentieth Century Asia) ಇವೇ ಮುಂತಾದ ಅಮೆರಿಕಾದ ಕಥಾಸಂಗ್ರಹಗಳಲ್ಲಿ ಈ ಕಾದಂಬರಿಯ ಕೆಲವು ಭಾಗಗಳನ್ನು ಪ್ರಕಟಿಸಲಾಗಿದೆ. ಭಾರತಕ್ಕೆ ಕೇವಲ ಪ್ರವಾಸಿಗ ರಾಗಿ ಬರದೇ ಗ್ರಾಮೀಣ ಜೀವನದ ಅಧ್ಯಯನ ಮಾಡುವ 'ಶಾಂತಿ ಸೇನೆ ಕೆಲಸಗಾರರು' (Peace Corps Workers), ಸಮಾಜ ಶಾಸ್ತ್ರಜ್ಞರು ಇವರೇ ಮುಂತಾದವರಿಗೂ ಈ ಕಾದಂಬರಿ ಬಹಳ ಪ್ರಿಯವಾಗಿದೆ.

ಮರಾಠಿ ಸಾಹಿತ್ಯದಲ್ಲಿ 'ಬನಗರವಾಡಿ' ಇಂದಿಗೂ ಜನಪ್ರಿಯವಾಗಿರಲು ಬಹುಶಃ ಕಥಾ ನಿರೂಪಣೆಯ ಸರಳ ಶೈಲಿ ಒಂದು ಮುಖ್ಯ ಕಾರಣವಾಗಿರಬಹುದು. ಹಳ್ಳಿ ಯವನನ್ನು ಸಾಹಸಾತ್ಮಕ ರೀತಿಯಲ್ಲಿ ವರ್ಣಿಸುವುದನ್ನಾಗಲೀ ಅಥವಾ ಹಳ್ಳಿಯ ಜೀವನದ ಆದರ್ಶಗಳನ್ನು ಕಲಾತ್ಮಕವಾಗಿ ವರ್ಣಿಸುವುದನ್ನಾಗಲಿ ಈ ಕಾದಂಬರಿಯಲ್ಲಿ ನಾವು ನೋಡುವುದಿಲ್ಲ. ಈ ಕಾದಂಬರಿಯಲ್ಲಿನ ಮುಖ್ಯ ಪಾತ್ರವೆಂದರೆ ಒಬ್ಬ ಬ್ರಾಹ್ಮಣ ಯುವಕ. ತನ್ನ ಜೀವನದಲ್ಲಿ ಮೊದಲನೆ ಕೆಲಸವಾದ ಪ್ರಾಥಮಿಕ ಶಾಲೆಯ ಅಧ್ಯಾಪಕ ವೃತ್ತಿಯನ್ನು ಆರಂಭಿಸಲು ಕುರುಬರ ವಸತಿಯಾದ ಬನಗರವಾಡಿ ಗ್ರಾಮಕ್ಕೆ ಈತನು ಬರುತ್ತಾನೆ. ವಿವಿಧ ಕಾರ್ಯಕ್ರಮಗಳಿಗೆ ಬಳಸಲು ಯೋಗ್ಯವಾದ ಒಂದು ಪುರಾತನ ಕಟ್ಟಡದಲ್ಲಿ ಈ ಶಾಲೆ ನಡೆಯಬೇಕಾಗಿದೆ. ಹಕ್ಕಿಗಳ ಚಿಲಿಪಿಲಿ ಮತ್ತು ಧೂಳು ಈ ಕಟ್ಟಡದ ಮುಖ್ಯ ಆಕರ್ಷಣೆ. ರಾಜನ ಆಡಳಿತದಲ್ಲಿರುವ ಈ ಗ್ರಾಮಕ್ಕೆ ಸಂಬಂಧಿಸಿದ ವಿದ್ಯಾ ಇಲಾಖೆಯ ಅಧಿಕಾರಿಗಳು ಲೆಕ್ಕಹಾಕಿದಂತೆ ಕನಿಷ್ಟ ಮಿತಿಯ

ಕುರ್ಚಿ, ಮೇಜು ಇತ್ಯಾದಿ ಸಲಕರಣೆಗಳನ್ನು ಶಾಲೆಗೆ ಒದಗಿಸಿದ ನಂತರ ಗ್ರಾಮದ ಕುರುಬರನ್ನು ಸಂಪೂರ್ಣವಾಗಿ ಮರೆತಿದ್ದಾರೆ. ಇನ್ನು ಈ ಕುರುಬರೋ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವ ಬದಲು ಕುರಿಗಳ ಹಿಂದೆ ಅಟ್ಟಲು ಆಸಕ್ತರಾಗಿದ್ದಾರೆ. ಇದರಿಂದಾಗಿ ವಿದ್ಯಾಭ್ಯಾಸದ ಬಗ್ಗೆ ಮೊದಲು ಗ್ರಾಮಸ್ಥರಿಗೆ ತಿಳುವಳಿಕೆ ಕೊಟ್ಟು, ನಂತರ ಕೆಲವು ಹುಡುಗರನ್ನು ಒಂದೆಡೆ ಸೇರಿಸಿ, ಶಾಲೆಯನ್ನು ಪ್ರಾರಂಭಿಸುವುದು ನಮ್ಮ ಉತ್ಸಾಹಶಾಲಿ ಅಧ್ಯಾಪಕನ ಮೊದಲ ಕರ್ತವ್ಯವಾಗಿದೆ. ಅವನ ಈ ಪ್ರಯತ್ನದಲ್ಲಿ ಗ್ರಾಮದ ಮುಖ್ಯಸ್ಥನು ಅವನಿಗೆ ಬೆಂಬಲ ನೀಡುತ್ತಾನೆ. ಈ ಯುವಕನು ಕೇವಲ ಒಬ್ಬ ಅಧ್ಯಾಪಕನಾಗಿರದೆ ಗ್ರಾಮಸ್ಥರೊಡನೆ ಬೆರೆತು ಅವರ ಸುಖ-ದುಃಖಗಳಲ್ಲಿ ಭಾಗಿಯಾಗುತ್ತಾನೆ. ಬನಗರವಾಡಿ ಗ್ರಾಮದ ನಿತ್ಯಜೀವನವನ್ನು ನಮ್ಮ ಈ ಅಧ್ಯಾಪಕನು ಓದುಗರಿಗೆ ವಿವರವಾಗಿ ಪರಿಚಯ ಮಾಡಿಕೊಡುತ್ತಾನೆ. ಗ್ರಾಮಸ್ಥರ ಬೆಂಬಲದಿಂದಲೇ ಹೊಸದಾಗಿ ನಿರ್ಮಿತವಾಗುವ ವ್ಯಾಯಾಮ ಶಾಲೆಯನ್ನು ದೇಹಪಾಲನೆಯಲ್ಲಿ ಆಸಕ್ತಿಯುಳ್ಳ ದೊರೆಯು ಉದ್ಘಾಟಿಸಲು ಒಪ್ಪಿಕೊಳ್ಳುತ್ತಾನೆ. ಈ ಘಟನೆಯು ಗ್ರಾಮಸ್ಥರಿಗೆ ಅಪರಿಮಿತ ಆನಂದವನ್ನುಂಟುಮಾಡುತ್ತದೆ. ಗ್ರಾಮದಲ್ಲಿನ ಕುರಿಸಾಕಾಣಿಕೆ, ಕೃಷಿ, ಗ್ರಾಮಸ್ಥರ ನಡುವಣ ಅಸೂಯೆ-ದ್ವೇಷಗಳು ಮತ್ತು ಬರಗಾಲದಿಂದ ಗ್ರಾಮಕ್ಕೆ ಉಂಟಾಗುವ ತೀವ್ರ ಹಾನಿ ಇವೆಲ್ಲವನ್ನೂ ಓದುಗರು ಅಧ್ಯಾಪಕನ ಮಾಧ್ಯಮದಿಂದ ಅರ್ಥಮಾಡಿಕೊಳ್ಳುತ್ತಾರೆ. ಈ ಕಾರಣದಿಂದಲೇ ಓದುಗರಿಗೆ ಈ ಅಧ್ಯಾಪಕನು ಕಾದಂಬರಿಯ ಒಂದು ಮುಖ್ಯ ಪಾತ್ರ. ಶ್ರೀ ವೆಂಕಟೇಶ ಮಾಡಗೂಳ್‌ಕರ್ ಅವರು ಪಟ್ಟಣದಲ್ಲಿನ ಓದುಗರನ್ನು ತಾತ್ಕಾಲಿಕವಾಗಿ ಹಳ್ಳಿಯ ಜೀವನದತ್ತ ಪ್ರಮಪಿಲ್ಲದೆ ಒಯ್ದಿರುವುದೇ ಬನಗರವಾಡಿ ಕಾದಂಬರಿಯ ಯಶಸ್ಸಿಗೆ ಕಾರಣ.

ಈ ಕಾದಂಬರಿಯು ತನ್ನದೇ ಆದ ಅಸ್ತಿತ್ವವನ್ನುಳ್ಳ ಪಾತ್ರಗಳ ಚಿತ್ರೀಕರಣ. ಇದರಲ್ಲಿ ಹೇಳಿಕೊಳ್ಳುವಂಥ ನಾಯಕರಾಗಲೀ ನಾಯಕಿಯರಾಗಲೀ ಇಲ್ಲ. ಖಳ ನಾಯಕರು ಕೆಲವರೇ ಇದ್ದಾರೆ. ಮತ್ತು ಅವರ ಕುಹಕಗಳು ಸರಳವಾದವು. ಇಲ್ಲಿನ ದುಷ್ಕೃತ್ಯಗಳು ನಿಷ್ಕಳಂಕವಾದವು. ತಿಂಡಿಯ ಪೊಟ್ಟಣವೆಂದು ಅರಿತು ಕದಿಯುವ ಕಳ್ಳನು ತನ್ನ ತಪ್ಪನ್ನು ಒಪ್ಪಿಕೊಳ್ಳಲು ಸಿದ್ಧನಾಗಿದ್ದಾನೆ. ಅವನ ದೃಷ್ಟಿಯಲ್ಲಿ ಇದು ಅಪರಾಧವಲ್ಲ. ಈ ಕಾದಂಬರಿಯಲ್ಲಿ ಕಾಮಪ್ರಚೋದನೆಯಾಗಲೀ, ಲೈಂಗಿಕ ವಿಶ್ಲೇಷಣೆಯಾಗಲೀ ಕಂಡುಬರುವುದಿಲ್ಲ. ಶೇಕು ಮತ್ತು ಅಂಜೀ ಈ ಎರಡು ಪಾತ್ರಗಳ ನಡುವೆ ಒಂದು ಸಣ್ಣ ಕಿಡಿ, ಪಕ್ಕದ ಹಳ್ಳಿಯ ಒಬ್ಬ ವಿಧವೆ ಮತ್ತು ಒಬ್ಬ ರಾಮೋಷಿ ಇವರ ನಡುವಣ ಸಂಬಂಧ, ಇವಿಷ್ಟೇ ನಾವು ನೋಡುವುದು.

ಈ ಕಾದಂಬರಿಯು ಯಾವುದೇ ಸಾಂಪ್ರದಾಯಿಕ ಪದ್ಧತಿಯನ್ನು ಅನುಸರಿಸಿಲ್ಲ. ಇದರಲ್ಲಿನ ಪಾತ್ರಗಳು ಹಳ್ಳಿಯ ಮುಖವಾಡಗಳನ್ನು ಧರಿಸಿರುವ ಪಟ್ಟಣದ ಜೀವಿಗಳಲ್ಲ.

ಅವರ ನಡೆ-ನುಡಿ, ಆಚಾರ-ವಿಚಾರ, ವ್ಯಕ್ತಿತ್ವ—ಇವೆಲ್ಲವೂ ಹಳ್ಳಿಯ ನಿತ್ಯಜೀವನದ ಒಂದು ಭಾಗವೇ ವಿನಾ ಹೊರಗಿನವಲ್ಲ. ಆದ್ದರಿಂದ ಇಲ್ಲಿನ ಸಂಪೂರ್ಣ ಚಿತ್ರಣ ಜೀವಂತವಾದದ್ದು. ಅವರ ಸ್ವಾಭಾವಿಕ ನಡವಳಿಕೆಗಳು ಪಟ್ಟಣದ ಆಡಂಬರಗಳಿಂದ ದೂರವಾಗಿವೆ. ಅವರು ತಮ್ಮ ಕಷ್ಟಜೀವನದಲ್ಲಿ ಶಾಂತಿ ನೆಮ್ಮದಿಗಳನ್ನು ಕಾಣುತ್ತಾರೆ. ಅವರ ಜೀವನ ತಥ್ಯವು ಯಾವುದೇ ಯೋಜನೆಯ ಮೊಳಕೆಯಾಗದೆ ಅವರು ಜೀವನ ಪರ್ಯಂತ ಪಡುವ ಕಷ್ಟಗಳ ಪರಿಣಾಮವಾಗಿದೆ.

ಕಾದಂಬರಿಯ ಪಾತ್ರಗಳು ಬಳಸುವ ಒರಟು ಭಾಷೆ ಆ ಪ್ರದೇಶದ ಗುಣವನ್ನು ಪ್ರತಿಬಿಂಬಿಸುತ್ತದೆ. ಇದಕ್ಕಾಗಿಯೇ ಕಾದಂಬರಿಕಾರರು ಗ್ರಾಮೀಣ ಭಾಷೆಯನ್ನು ಬಳಸಿಲ್ಲ. ಆದರೆ ಸಂದರ್ಭ ಮತ್ತು ಪಾತ್ರಗಳನ್ನು ದೃಷ್ಟಿಯಲ್ಲಿಟ್ಟುಕೊಂಡು, ಪಾತ್ರಗಳ ಬೆಳವಣಿಗೆಗೆ ಮತ್ತು ಅವುಗಳ ವಿಶಿಷ್ಟತೆಗೆ ಎಲ್ಲಿ ಅವಶ್ಯಕವೋ ಅಲ್ಲಿ ಮಾತ್ರ ಈ ಭಾಷೆಯನ್ನು ಬಳಸಲಾಗಿದೆ. ಇದೇ ಪ್ರಕಾರವಾಗಿ ಪಟ್ಟಣದ ಸುಧಾರಿಸಿದ ಭಾಷೆಯನ್ನು ಸಹ ಉಪಯೋಗಿಸಲಾಗಿದೆ. ಆದರೆ ಈ ಬಳಕೆಯು ಸ್ವಾಭಾವಿಕವಾಗಿದೆ. ಇಲ್ಲಿನ ಕಷ್ಟ-ಕಾರ್ಪಣ್ಯಗಳೂ, ಸುಖ-ದುಃಖಗಳೂ ಗ್ರಾಮೀಣ ಪಂಗಡಗಳ ಸಾಂಪ್ರದಾಯಕ ಪದ್ಧತಿಗಳನ್ನು ಅನುಸರಿಸಿದ್ದಾಗಿವೆ. ಹಳ್ಳಿಯ ಜೀವನವು ನಿಸರ್ಗದ ರೀತಿನೀತಿಗಳನ್ನೂ, ನಿರಂತರವಾಗಿ ನಡೆದುಬರುವ ಬದಲಾವಣೆಗಳನ್ನೂ ಮತ್ತು ಮನುಷ್ಯನ ಜೀವನ ಲಹರಿಯನ್ನೂ ಅನುಸರಿಸಿದೆ. ನೈಸರ್ಗಿಕ ರೀತಿನೀತಿ ಹಾಗೂ ಮನುಷ್ಯನ ಜೀವನ—ಇವೇ 'ಬನಗರವಾಡಿ'ಯ ಮುಖ್ಯ ತಥ್ಯವಾಗಿದೆ.

'ಬನಗರವಾಡಿ' ಅತ್ಯಂತ ಜನಪ್ರಿಯ ಕಾದಂಬರಿಯಾಗಲು ಮತ್ತೊಂದು ಕಾರಣವೆಂದರೆ 1935ರಿಂದ ಮರಾಠಿ ಕಾದಂಬರಿಯ ಏಕರೂಪತೆ. ಬೇಡೇಕರ್ ಅವರ 'ರನಂಗನ್' ಮತ್ತು ಇತರ ಕೆಲವು ಕಾದಂಬರಿಗಳು ಮಾತ್ರ ಈ ಹಾದಿಯನ್ನು ಅನುಸರಿಸಲಿಲ್ಲ. ಈ ಕಾಲದ ಕಾದಂಬರಿಗಳು ನಗರದಲ್ಲಿ ವಾಸಿಸುವ ಮಧ್ಯಸ್ಥವರ್ಗದ ಸಂಸಾರಗಳನ್ನು ಕುರಿತದ್ದಾಗಿದ್ದವು. ಮೊದಮೊದಲು ಈ ಕಾದಂಬರಿಗಳು ಓದುಗರಲ್ಲಿ ಅಭಿರುಚಿ ಮೂಡಿಸಿದರೂ ಬರಬರುತ್ತಾ ಬೇಸರವನ್ನುಂಟುಮಾಡಿದವು. ತಡೆಯಿಲ್ಲದೆ ಪ್ರವಹಿಸುತ್ತಿದ್ದ ಮರಾಠಿ ಸಾಹಿತ್ಯವು ಈಗ ಸ್ಥಬ್ಧವಾದಂತೆ ಕಂಡುಬಂದಿತು. ಈ ಸ್ಥಬ್ಧತೆಯಿಂದ ವಿಮೋಚನೆಯೇ ಇಲ್ಲವೆಂಬ ಒಂದು ಭೀತಿ ತಲೆದೋರಿತು. ತರುಣ ಲೇಖಕರಿಗೆ ಇದು ಸ್ಪಷ್ಟವಾಗಿ ಬದಲಾವಣೆ ಅನಿವಾರ್ಯವಾಯಿತು. ಹೀಗಾಗಿ ಇಲ್ಲಿಯವರೆಗೆ ಪ್ರವೇಶಿಸದೇ ಇದ್ದ ಗ್ರಾಮೀಣ ಚಿತ್ರಣವನ್ನು ಮರಾಠಿ ಕಾದಂಬರಿ ಹೊಕ್ಕು, ಗ್ರಾಮೀಣ ಕಾದಂಬರಿಗಳಿಗೆ ಜನ್ಮಕೊಟ್ಟಿತು.

ಪಟ್ಟಣಗಳಲ್ಲಿ ವಾಸಿಸುವ ಬಡವರು, ಗ್ರಾಮೀಣ ಪಂಗಡಗಳು ಮತ್ತು ಬುಡಕಟ್ಟು ಜನಾಂಗ ಇವರುಗಳನ್ನು ಕುರಿತ ಕಾದಂಬರಿಗಳು ಈಗ ಹೊರಬರಲಾರಂಭಿಸಿ

ಅಂದಿನ ಮಾದರಿಯಾದವು. ಸಮಾಜದಲ್ಲಿ ತೊಂದರೆಗಳನ್ನು ಅನುಭವಿಸುತ್ತಿದ್ದು, ಇಲ್ಲಿಯವರೆಗೆ ಕಾದಂಬರಿಕಾರರ ದೃಷ್ಟಿಗೆ ಬೀಳದಿದ್ದ ಅನೇಕ ಪಂಗಡಗಳ ಬಗ್ಗೆ ಕಾದಂಬರಿಗಳು ಹೊರಬಂದವು. ಇಂತಹ ಕಥೆಗಳನ್ನು ಬರೆಯುವಾಗ ಲೇಖಕರು ಪಾತ್ರಗಳ ಬಗ್ಗೆ ಕರುಣಾಹೃದಯಿಗಳಾಗುತ್ತಿದ್ದರೆಂದು ಹೇಳಿದರೆ ಅದು ಅತಿಶಯೋಕ್ತಿಯಾಗಲಾರದು. ವಿಭಾವರಿ ಶಿರೋರ್ಕರ್, ತೋಕಲ್, ಡೀಗೆ ಮೊದಲಾದವರ ಕೃತಿಗಳಲ್ಲಿ ಈ ಬಗೆಯ ಕರುಣೆ ಚೆನ್ನಾಗಿ ಕಂಡುಬರುತ್ತದೆ. ಇದರಿಂದಾಗಿ ಈ ಕಾದಂಬರಿಗಳು ವಾಸ್ತವಿಕತೆಯಿಂದ ದೂರವಿರುತ್ತವೆ. ಕಾದಂಬರಿ ಓದುಗರಿಗೆ ಸ್ವಾಭಾವಿಕ ಸೃಷ್ಟಿಯಂತೆ ಕಂಡುಬರಬೇಕಾದರೆ ಕಥೆಯಲ್ಲಿನ ಪಾತ್ರಗಳು ಜೀವಂತವಾಗಿದ್ದು, ಓದುಗರೊಡನೆ ಬೆರೆಯಬೇಕು.

ಬನಗರವಾಡಿ ಗ್ರಾಮದ ಕುರುಬರ ಪ್ರಪಂಚ ಕೊಳಕು ಮತ್ತು ಕಷ್ಟಗಳಿಂದ ಕೂಡಿದೆ. ಪಟ್ಟಣಗಳ ಸಂಸ್ಕೃತಿ ಮತ್ತು ನಾಗರಿಕತೆ ಇಲ್ಲಿ ಲವಲೇಶವೂ ಇಲ್ಲ. ಈ ಜನಾಂಗದ ಕಷ್ಟ ಜೀವನ, ಅದಕ್ಕಾಗಿ ಅವರು ಧೈರ್ಯಗೆಡದೆ ಇರುವುದು, ಕುರುಬರ ಅಜ್ಞಾನ, ವಿದ್ಯಾಭ್ಯಾಸದ ಕಡೆ ಅವರ ನಿರ್ಲಕ್ಷ್ಯ, ಅವರು ಎದುರಿಸುವ ನೈಸರ್ಗಿಕ ಅಪಘಾತ ಮತ್ತು ಎಲ್ಲಕ್ಕಿಂತಲೂ ಹೆಚ್ಚಾಗಿ 'ಬನಗರವಾಡಿ' ಎಂದು ಹೆಸರು ಬರಲು ಕಾರಣವಾದ ಸೂರ್ಯನ ಕಿರಣಗಳಿಂದ ಸುಟ್ಟಿರುವ ಗುಡಿಸಲುಗಳು—ಈ ಎಲ್ಲ ಅಂಶಗಳನ್ನೂ ಮನವೊಪ್ಪುವ ರೀತಿಯಲ್ಲಿ ಈ ಕಾದಂಬರಿಯಲ್ಲಿ ವರ್ಣಿಸಲಾಗಿದೆ.

'ಬನಗರವಾಡಿ' ವೆಂಕಟೇಶ ಮಾಡಗೂಳ್ಕರ್ ಅವರ ಮೊಟ್ಟಮೊದಲನೆ ಕಾದಂಬರಿ. ಆವರೂ ಅವರನ್ನು ಸಣ್ಣ ಕಥೆಗಳ ಅಗ್ರ ಬರಹಕಾರರೆಂದು ಅನೇಕ ವರ್ಷಗಳ ಕಾಲ ಪರಿಗಣಿಸಲಾಗಿತ್ತು. ಹಳ್ಳಿಯ ಜೀವನದ ಬಗ್ಗೆ ಸಣ್ಣ ಕಥೆಗಳನ್ನೂ ಲೇಖನಗಳನ್ನೂ ಅವರು ಬರೆದಿದ್ದಾರೆ. ಗಾಂಧೀಜಿಯವರ ಕೊಲೆಯ ನಂತರದ ಘಟನೆಗಳನ್ನು ಪರಿಶೀಲಿಸುವ 'ವತ್ತಾಳ್' ಅವರ ಎರಡನೆ ಕಾದಂಬರಿ. ಆದರೆ ಇದು 'ಬನಗರವಾಡಿ'ಯಷ್ಟು ಜನಪ್ರಿಯವಾಗಲಿಲ್ಲ. ಸಣ್ಣ ಕಥೆಗಳನ್ನು ಮತ್ತು ಲೇಖನಗಳನ್ನು ಬರೆಯುವುದನ್ನು ಅವರು ಮುಂದುವರೆಸಿದ್ದಾರೆ. ಮರಾಠಿ ಕಾದಂಬರಿಕಾರರಲ್ಲಿ ಅವರು ಅಗ್ರಸ್ಥಾನವನ್ನು ಪಡೆಯುವುದರಲ್ಲಿ 'ಬನಗರವಾಡಿ'ಯ ಪ್ರಭಾವ ಮಹತ್ವದ್ದು. ಗ್ರಾಮೀಣ ಕಾದಂಬರಿಗಳನ್ನು ರಚಿಸಿದವರ ಪೈಕಿ ಮಾಡಗೂಳ್ಕರ್ ಅವರಲ್ಲದೆ ಇನ್ನೂ ಕೆಲವರಿದ್ದಾರೆ. ಪಶ್ಚಿಮ ಕರಾವಳಿಯ ಪರನಾಯ್, ಮುರದ್, ದಾಪೋಲಿ ಮುಂತಾದ ಪ್ರದೇಶಗಳ ಬಗ್ಗೆ ಎಸ್. ಎನ್. ಪೆಂಡ್ಸೆ ಅವರೂ ಸಹ ಇದೇ ಸಮಯದಲ್ಲಿ ಬರೆಯುತ್ತಿದ್ದರು. ಆದರೆ ಗ್ರಾಮೀಣ ಪ್ರದೇಶದ ಕೆಳದರ್ಜೆಯ ಅಥವಾ ಹಿಂದುಳಿದ ಜನಾಂಗದವರೇ ಪೆಂಡ್ಸೆ ಅವರ ಕಾದಂಬರಿಗಳ ಮುಖ್ಯ ವಿಷಯವಾಗಿರಲಿಲ್ಲ. ಅವರು ಹೆಚ್ಚಾಗಿ ಮಧ್ಯಮ ವರ್ಗದ ಬ್ರಾಹ್ಮಣರ ಬಗ್ಗೆ ಬರೆಯುತ್ತಿದ್ದರು. ಅವರು ಬರೆದಿರುವ "ಹದ್ದಾಪರ್' 'ಬನಗರವಾಡಿ'ಯಂತೆ ಒಬ್ಬ ಅಧ್ಯಾಪಕನನ್ನು ಕುರಿತದ್ದಾಗಿದೆ. ಆದರೆ

'ಬನಗರವಾಡಿ'ಯ ಅಧ್ಯಾಪಕ ಕಥಾ ನಿರೂಪಕನಾದರೆ 'ಹದ್ದಾಪರ್'ನ ಅಧ್ಯಾಪಕ ಕಥಾನಾಯಕನಾಗಿದ್ದಾನೆ. ಅವರ ಕಥೆಗಳಲ್ಲಿನ ಅನೇಕ ಪಾತ್ರಗಳು ಸಮಾಜದ ಏರಿಳಿತ ಗಳಲ್ಲಿ ಮೇಲೆ ಮೇಲೆ ಹೋಗಲು ಪ್ರಯತ್ನಿಸುತ್ತಾರೆ ಅಥವಾ ಹಳ್ಳಿಯಿಂದ ತಾಲ್ಲೂಕಿಗೆ ಮತ್ತೆ ಅಲ್ಲಿಂದ ಪಟ್ಟಣಕ್ಕೆ ಹೋಗಲು ಯತ್ನಿಸುತ್ತಾರೆ.

ಕಳೆದ ಹತ್ತು ಹದಿನೈದು ವರುಷಗಳಲ್ಲಿ ಮರಾಠಿ ಕಾದಂಬರಿಯು ಹಳ್ಳಿಯಿಂದ ಮತ್ತೆ ಪಟ್ಟಣದ ಕಡೆ ಸಾಗಿದೆ. ಪಟ್ಟಣಗಳಲ್ಲಿನ ಬಡವರು, ಗುಡಿಸಲುಗಳಲ್ಲಿ ವಾಸಿಸು ವವರು ಇಲ್ಲವೇ ಸಣ್ಣ ಸಣ್ಣ ನಗರಗಳ ಜನರ ಜೀವನ— ಇವುಗಳ ಬಗ್ಗೆ ಅನೇಕ ತರುಣ ಕಾದಂಬರಿಕಾರರು ಬರೆದಿದ್ದಾರೆ. ಜಯವಂತ ದಲ್ವಿ ಅವರ 'ಚಕ್ರ', ಎಂ. ಎಂ. ಕರಣಿಕರ ಇವರ 'ಮೊಹಿಂಜಿ ಖಾದಿ', ಬಾವು ಪಾಧ್ಯೆ ಅವರ 'ವಾಸು ನಕ' ಇವುಗಳು ಆ ಗುಂಪಿಗೆ ಸೇರಿದ ಕಾದಂಬರಿಗಳು. ಕಾದಂಬರಿಕಾರರ ಮತ್ತೊಂದು ಪಂಗಡವು ನಗರಗಳಲ್ಲಿನ ಕೊರತೆಗಳನ್ನು ಚಿತ್ರಿಸುವಲ್ಲಿ ತೊಡಗಿದೆ. ಧಿದೇಶಿಯರ ಮಾದರಿಯನ್ನು ಅನುಸರಿಸಿ ಇಂತಹ ಕಾದಂಬರಿಗಳು ಉದ್ಭವಿಸಿರುವಂತೆ ಕಂಡುಬರುತ್ತದೆ. ಆದರೆ ಅವರ ಚಿತ್ರಣವು ಕೇವಲ ಭಾರತದ ಜೀವನವೇ ಆಗಿದ್ದು, ಅವರು ನಿರ್ಭೀತರಾಗಿ ಸತ್ಯಾಂಶವನ್ನು ಹೊರಗೆಡಹಲು ಅಣಿಯಾಗಿದ್ದಾರೆ. ಇಂಥವುಗಳ ಪೈಕಿ ಮುಖ್ಯವಾದ ವೆಂದರೆ ಬಾಲಚಂದ್ರ ನೇಮದೆ ಅವರ 'ಕೋಸಲ' ಮತ್ತು ಬಾವು ಪಾಧ್ಯೆ ಅವರ 'ಬ್ಯಾರಿಸ್ಟರ್ ಅನಿರುದ್ಧ ಧೋಪೇಶ್ವರ್ಕರ್.

ಮರಾಠಿ ಕಾದಂಬರಿಯು ನಾನಾ ಕಾರಣಗಳಿಂದಾಗಿ ನಾನಾ ರೀತಿಯಲ್ಲಿ ಬೆಳೆದಿದೆ. ಆದರೆ ಈ ಸಂದರ್ಭದಲ್ಲಿ ಅವುಗಳನ್ನೆಲ್ಲ ವಿವರಿಸುವ ಅವಶ್ಯಕತೆ ಇಲ್ಲ. ಪದ್ಯ ಮತ್ತು ಸಣ್ಣ ಕಥೆಗಳಂತೆಯೇ ಮರಾಠಿ ಕಾದಂಬರಿಯು ಸಹ ಎರಡನೆ ಮಹಾಯುದ್ಧದ ನಂತರ ಸಾಂಪ್ರದಾಯಿಕ ಪದ್ಧತಿಯಿಂದ ದೂರವಾಗಿ ಹೊಸ ಹೊಸ ಅಧ್ಯಾಯಗಳನ್ನು ಪಡೆದಿದೆ. ಈ ಮಾದರಿಯ ಬೆಳವಣಿಗೆ ಸರ್ವತೋಮುಖವಾಗಿದೆ. ಆದರೆ ಎಲ್ಲಾ ಕ್ಷೇತ್ರಗಳಲ್ಲೂ ಈ ಬೆಳವಣಿಗೆ ಇನ್ನೂ ಅತೃಪ್ತ ಮಟ್ಟದಲ್ಲೇ ಇದೆ. ಮರಾಠಿ ಕಾದಂಬರಿಯ ಬೆಳವಣಿಗೆಯ ಹಂತವು ಯಾವ ಮಟ್ಟವನ್ನು ತಲುಪಬಹುದೆಂದು ನಿರೀಕ್ಷಿಸಲಾಗಿತ್ತೋ ಆ ಮಟ್ಟಕ್ಕೆ ಅದಿನ್ನೂ ತಲುಪಿಲ್ಲ. ಆದಾಗ್ಯೂ ವಿವೇಚನಾ ಹಾಗೂ ವಿಮರ್ಶಾತ್ಮಕ ಲಕ್ಷಣಗಳು ಮರಾಠಿ ಕಾದಂಬರಿಯಲ್ಲಿ ಸಾಕಷ್ಟು ಕಾಣಿಸಿಕೊಂಡಿರುವುದರಿಂದ ಸಾಹಿತ್ಯದ ಈ ವಿಭಾಗದ ಬೆಳವಣಿಗೆಗೆ ತಡೆಯಿಲ್ಲವೆಂಬ ಧೈರ್ಯ ಮೂಡಿದೆ. ಒಂದುನೂರ ಇಪ್ಪತ್ತೈದು ವರ್ಷಗಳ ನಂತರ, ಇಂದು, ಮರಾಠಿ ಕಾದಂಬರಿಯು ಓಜಸ್ಸಿನಿಂದ ಕೂಡಿ, ಅಭಿವೃದ್ಧಿ ಹೊಂದುತ್ತಿರುವ ಕಲೆಯಾಗಿದೆ. ಈ ಎಲ್ಲಾ ಸ್ವಾಗತಾರ್ಹ ಬೆಳವಣಿಗೆಯಲ್ಲಿ ಹಳ್ಳಿಯ ಚಿತ್ರಣವನ್ನು ಕುರಿತ ಉತ್ತಮ ಕಲೆಗೆ 'ಬನಗರವಾಡಿ'ಯ ಉದಾಹರಣೆ ಸಾಟಿ ಇಲ್ಲದ್ದಾಗಿದೆ.

# ೧

ರೊಟ್ಟಿ ಗಂಟು ಕಟ್ಟಿಕೊಂಡು ನಾ ಬನಗರವಾಡಿಗೆ ಹೊರಟಿದ್ದೆ.

ಇನ್ನೂ ಕತ್ತಲು ಕವಿದಿತ್ತು. ತಾರಗೆಗಳು ಮಿನುಗುತ್ತಿದ್ದವು. ಇದುರಿಗೆ ಅಂಕು ಡೊಂಕಾಗಿ ನಡೆದ ದಾರಿ ಮಸುಕು ಮಸಕಾಗಿ ಕಾಣುತ್ತಿತ್ತು. ಇನ್ನೂ ರಾತ್ರಿ ಎಷ್ಟಿದೆ, ಎಷ್ಟೊತ್ತಿನ ಮೇಲೆ ಬೆಳಕು ಹರಿಯುವದು ಇದನ್ನೆಲ್ಲ ನಿಶ್ಚಿತವಾಗಿ ಹೇಳುವುದು ಸಾಧ್ಯವಿರಲಿಲ್ಲ. ನಾನು ಬಹಳ ಬೇಗ ಹೊರಟೆನೇನೋ ಎಂಬ ಸಂಶಯವು ತಲೆದೋರಹತ್ತಿತ್ತು. ನನ್ನ ಹೆಜ್ಜೆಗಳ ಸಪ್ಪಳವೇ ನನಗೆ ದೊಡ್ಡದೆಂದೆನಿಸುತ್ತಿತ್ತು. ಬಹಳ ಹೊತ್ತು ನಡೆದದ್ದರಿಂದ, ಮೈಯಲ್ಲಿ ತಾಲಬದ್ಧತೆ ಬಂದಂತಾಗಿತ್ತು.

ಇದಕ್ಕೂ ಮೊದಲು ಬನಗರವಾಡಿಗೆ ಎಂದೂ ಹೋಗದೆ ಇದ್ದದ್ದರಿಂದ, ದಾರಿ ತಪ್ಪುವುದೋ ಎಂದೆನಿಸುತ್ತಿತ್ತು. ಆ ಊರು ಹೇಗಿದ್ದೀತು, ಅಲ್ಲಿಯ ಜನ ಹೇಗಿರಬಹುದು, ಅಲ್ಲಿಗೆ ಹೋದ ಮೇಲೆ ಇರುವದೆಲ್ಲಿ ಇವೇ ಮೊದಲಾದ ಪ್ರಶ್ನೆಗಳು ಮನಸಿನಲ್ಲಿ ಏಳುತ್ತಿದ್ದವು. ಎರಡು ದಿನ ಇದ್ದು ಅಲ್ಲಿಯ ಪರಿಸ್ಥಿತಿ ಕಂಡು ತಿರುಗಿ ಮನೆಗೆ ಬರುವದಿತ್ತು. ಅಲ್ಲಿ ಕಾಯಮಾಗಿ ಇರಬೇಕಾದ್ದರಿಂದ ಕೆಲವು ಸಾಮಾನುಗಳನ್ನು ಒಯ್ಯುವದು ಅವಶ್ಯವಿತ್ತು. ಇವತ್ತು ನಾ ಬರೀ ಒಂದು ಧೋತರ, ಹೊದ್ದುಕೊಳ್ಳಲಿಕ್ಕೆ ಒಂದು ಚಾದರ ಮತ್ತು ಎರಡು ಅರಿವಿ ಇಷ್ಟೇ ತೆಗೊಂಡು ಹೊರಟಿದ್ದೆ.

ಬೈಲಿನಲ್ಲಿ ತಂಗಾಳಿ ಬೀಸುತ್ತಿತ್ತು. ತಾರಗೆಗಳು ಮಂದವಾಗಹತ್ತಿದ್ದವು. ಇತ್ತ ಬೆಳದಿಂಗಳೂ ಅಲ್ಲ. ಅತ್ತ ಬೆಳಕೂ ಹರಿದಿದ್ದಿಲ್ಲ, ಬೇವು-ಜಾಲಿ ಗಿಡಗಳ ಪಂಚಿತ ವಾಸನೆ ಬರುತ್ತಿತ್ತು. ದಾರಿ ಮೇಲಿನ ಧೂಳು ತಂಪು ಅನಿಸುತ್ತಿತ್ತು.

ನೋಡ ನೋಡುತ್ತಿರುವಲ್ಲೇ ಕತ್ತಲು ಮಾಯವಾಯಿತು. ಸುತ್ತಲಿನ ಸೃಷ್ಟಿ ಕಾಣಹತ್ತಿತ್ತು. ಗಿಡಗಂಟಿ. ಕಲ್ಲುಬಂಡೆಗಳಿಗೆ ಆಕಾರ ಬರತೊಡಗಿತು. ತಾರಗಳೆಲ್ಲ ಮಾಯವಾದವು. ಚಿಮ್ಮಂಡಿಯ ದನಿ ಅಡಗಿತ್ತು. ಸಿದ್ದೆ ಮಾಡಿ ಎದ್ದ ಕಾಗೆಗಳ ಕಾವಕಾವ ಕೇಳಿಸ ಹತ್ತಿತ್ತು.

ಕೆಂಪು ಹಳದಿ ಸೂರ್ಯನು ಬೈಲಿನಾಚೆಯಿಂದ ಮೇಲಕ್ಕೆರುತ್ತಿದ್ದನು. ಹಸರು ಮೂಡಿಯ ಬೆಳಕಿಗೆ ಹಳದಿ ಅಂಚು ಕಾಣಹತ್ತಿತ್ತು. ಬಾರಿ ಗಿಡದಲ್ಲಿ ಅಡಗಿದ್ದ ಗೊರವಂಕ ಎಚ್ಚರಾದವು. ರೆಕ್ಕೆ ಹಾರಿಸುತ್ತ, ಕುಣಿಯುತ್ತ ಕಿಲಿಬಿಲಿ ಮಾಡಹತ್ತಿದವು. ಕಂಟಿಗಳಲ್ಲಿ ಕೂತ ಹಕ್ಕಿ ರೆಕ್ಕೆ ಪಸರಿಸಿ, ಕಾಲಮ್ಯಾಲೆ ನಿಂತು ದನಿ ಮಾಡಹತ್ತಿದವು. ಕಾಗೆಗಳು ಹಾರಾಡಹತ್ತಿದವು.

ಬೈಲಿನಲ್ಲಿ ಒಣಗಿದ ಹುಲ್ಲು ಸೂರ್ಯನ ಮೊದಲ ಕಿರಣಗಳಿಂದ ಎಚ್ಚತ್ತಿತು. ಹಲ್ಲಿನಲ್ಲಿ ಅಡಗಿದ ಹುಳಗಳ ಜಗತ್ತಿಗೆ ಬೆಳಗಾಗಿತ್ತು. ಭೋರಂಗಿ ಗಿಮಿಗಿಮಿ ತಿರುಗ

ಹತ್ತಿದವು. ಚಿಟ್ಟೆಗಳು ಹಾರಾಡ ಹತ್ತಿದವು. ಓತಿಕಾಟ ಸರದಾಡ ಹತ್ತಿದವು. ಬೈಲಿನಲ್ಲಿ ಗುಂಪುಗುಂಪಾಗಿ ಒಳಗೆ ಅಡಗಿದ ಗುಂಡಿ ಹುಳಗಳು, ಒಳಗೆ ಜಾರಿ ಬೀಳುವ ಹುಳ ಗಳನ್ನು ಮಣ್ಣಿನಲ್ಲಿ ಅಡಗಿ, ತಿನ್ನಲು ಸಜ್ಜಾಗಿದ್ದವು. ಬೈಲಿನೊಳಗಿನ ಬಿಲದೊಳಗಿಂದ ಉಡಗಳು ತಮ್ಮ ಮುಖ ಹೊರಗೆ ತೆಗೆದು, ಕೊರಳ ಕೆಳಗಿನ ಭಾಗವನ್ನು ಅಲೆದಾಡಿಸುತ್ತ, ಕೀಟಕಗಳು ತಮ್ಮ ನಾಲಿಗೆಗಳ ಹಿಡಿತದಲ್ಲಿ ಬರುವ ದಾರಿ ಕಾಯುತ್ತಿದ್ದವು.

ಹಕ್ಕಿ ಗಿಡ ಬಿಟ್ಟು, ದಾರಿಯ ಮೇಲೆ ಬಂದು ಸಡಗರದಿಂದ, ಗೋಣು ಅಳಗಾಡಿ ಸುತ್ತ, ಧೂಳಿಯಲ್ಲಿ ಬಿದ್ದ ಹುಲ್ಲಿನ ಬೀಜ ತಿನ್ನುತ್ತಿದ್ದವು. ಸಪಾಟಾದ ಧೂಳಿಯಲ್ಲಿ ಅವುಗಳ ಪಾದಗಳು ಮೂಡಿ ನಕ್ಷೆ ತಯಾರಾಗುತ್ತಿತ್ತು.

ಬೆನ್ನ ಮೇಲಿದ್ದ ಚೀಲ ಕೈಯಲ್ಲಿ ಹಿಡಿದು ನಾನು ವೇಗದಿಂದ ಮುಂದೆ ಸಾಗಹತ್ತಿದೆ. ಬರಗಾಲಿನಿಂದ ಧೂಳು ಮೇಲಕ್ಕೆ ಹಾರುತ್ತಿತ್ತು. ಪಾಯಜಮಾ ಫಡಫಡ ಸಪ್ಪಳ ಮಾಡುತ್ತಿತ್ತು. ಅದನ್ನು ಕೇಳಿ ದಾರಿಯ ಮೇಲಿದ್ದ ಹಕ್ಕಿಗಳು ಎತ್ತರಕ್ಕೆ ಹಾರ ಹತ್ತಿದವು. ಉದ್ದುದ್ದ ಹೆಜ್ಜೆ ಹಾಕುತ್ತ ನಾನು ನಡದೆ. ನಡೆದು ನಡೆದು ಹೊಟ್ಟೆ ಒಳಕ್ಕೆ ಹೋಗಿತ್ತು. ಚೀಲದಲ್ಲಿದ್ದ ರೊಟ್ಟಿ, ಬೆಳ್ಳುಳ್ಳಿ ಚಟ್ನಿ ಮತ್ತು ಸಂಡಗೆಗಳ ವಾಸನೆ ಘಮಘಮಿಸುತ್ತಿತ್ತು. ನಾನು ನೀಟಾಗಿ ಹೆಜ್ಜೆ ಇಡತಾನೇ ಇದ್ದೆ. ಬೆರಳೊಳಗಿಂದ ಧೂಳು ಮೇಲಕ್ಕೆ ಬರುತ್ತಾ ಇತ್ತು. ಪಾದ ಧೂಳಿಯಾಗಿತ್ತು. ಪಾಯಜಮಾ ಹೊಲಸಾಗುತ್ತಾ ಇತ್ತು. ದಾರಿ ಇನ್ನೂ ದೂರವಾಗಿತ್ತು.

ಹಳದಿ ಕಂದು ಬಣ್ಣದ ಬೈಲು ಸುತ್ತಲೂ ಹಬ್ಬಿತ್ತು. ನೋಡಿದಲ್ಲೆಲ್ಲಾ ಬರೇ ಬೈಲು ! ಈ ಬೈಲು ಹೊತ್ತು ಏರಿದಂತೆ, ಬಿಸುಲಿನ ತಾಪದಿಂದ ಸ್ವಲ್ಪ ಹಸಿರು ಮತ್ತಷ್ಟು ಉಗ್ರವಾಗಿ ಕಾಣಹತ್ತಿತು. ಅಲ್ಲಿಲ್ಲ ತೆಗ್ಗಿನಲ್ಲಿ ಸ್ವಲ್ಪ ಹಸಿರು ಕಾಣಸಿಗುತ್ತಿತ್ತು. ಇದನ್ನು ಬಿಟ್ಟರೆ ನೋಡಿದಲ್ಲೆಲ್ಲ ಬರೀ ಕಲ್ಲು ಬಂಡೆಗಳು ಕಾಣುತ್ತಿದ್ದವು. ಬಾರಿ, ಜಾಲಿ ಕಂಟಿಹಾಂಗ ಕಾಣುತ್ತಿದ್ದವು. ಇವುಗಳ ನಡುವೆ ಧೂಳಿನಿಂದ ತುಂಬಿದ ಕಿರಿದಾದ, ಕಲ್ಲು ಗಳಿಂದ ಎತ್ತರವಾದ ಚಕಡಿ ದಾರಿ ಹಾಯ್ದಿತ್ತು.

ಸೂರ್ಯ ಸಾವಕಾಶವಾಗಿ ಮೇಲಕ್ಕೇರುತ್ತಿದ್ದ. ನಸುಕಿನಲ್ಲಿ ಸೌಮ್ಯವೆನಿಸಿದ ಬೈಲು ಈಗ ರಣವೆನಿಸುತ್ತಿತ್ತು. ಬೆಳಗಿನಲ್ಲಿ ಕೇಳಬರುತ್ತಿದ್ದ ಹಕ್ಕಿಗಳ ಚಿಲಿಪಿಲಿ ಈಗಲೆ ಕಡಿಮೆ ಯಾಗಿತ್ತು. ಅಲ್ಲಲ್ಲಿ ಮಣ್ಣು ಬಣ್ಣದ ಗುಬ್ಬಿ, ಎತ್ತರ ಹಾರಿ, ಬಾಣವಂತೆ ಕೆಳಗೆ ಬರುವದು ಕಾಣುತ್ತಿತ್ತು. ಹದ್ದೊಂದು ವೇಗದಿಂದ ಕೆಳಗೆ ಬಂದದ್ದನ್ನು ನೋಡಿ ಚಿಕ್ಕ ಹಕ್ಕಿಗಳು ಅಂಜಿ ಗೊಂದಲವೆಬ್ಬಿಸಿದವು.

ಮುಂದೆ ಮುಂದೆ ಸಾಗಿದಂತೆ ಕೆಂಪು, ಯರಿ ಭೂಮಿಗಳ ತುಂಡು ಅಲ್ಲಲ್ಲಿ ಬಿದ್ದಂತೆ ಕಾಣಹತ್ತಿದವು. ನೀರು ಕಾಣದ ಭೂಮಿ ಬಿಸಿಲಿನಿಂದ ಬಿರುಕುಬಿಟ್ಟಿತ್ತು. ಕಾಲು ಒಳಗೆ ಹೋಗುವಷ್ಟು ಬಿರುಕುಗಳಿದ್ದವು. ಈ ಭೂಮಿ ಕಂಡೊಡನೆ ಜನವಸತಿ ಸಮೀಪವಿರ

ಬೇಕೆಂದು ಅನಿಸಿ ನಾನು ಕ್ಷಿತಿಜದತ್ತ ನೋಡ ಹತ್ತಿದೆ. ಆದರೆ ಇನ್ನೂ ಮನೆಗಳು ಕಾಣುತ್ತಿರಲಿಲ್ಲ. ಗಿಡಗಳ ತೋಪೂ ಕಾಣುತ್ತಿರಲಿಲ್ಲ.

ಎಲ್ಲ ಕಡೆಯಲ್ಲಿಯೂ ರಣ ಬಿಸಿಲು, ನಸುಕಿನಲ್ಲಿ ತಂಪು ಅನಿಸುವ ಧೂಳು ಈಗ ಕಾದಿತ್ತು. ನೊಣಗಳ ಗುಂಪೊಂದು ನನ್ನ ತಲೆಯ ಮೇಲೆ ಹಾರಾಡಹತ್ತಿತು. ಅವುಗಳ ದನಿಯಿಂದ ನಾನು ಬೇಸರಗೊಂಡೆ. ಟೊಪ್ಪಿಗೆ ಬೀಸುತ್ತ ಅವನ್ನು ಹಾರಿಸುವ ಪ್ರಯತ್ನ ಮಾಡಿದೆ. ಆದರೆ ಅವೇನು ಹೋಗಲಿಲ್ಲ. ನೂರಿನ್ನೂರು ನೊಣಗಳು ಹಾಗೇ ನನ್ನ ತಲೆಯ ಸುತ್ತು ಹಾರುತ್ತಲೇ ಇದ್ದವು. ಈ ಮನುಷ್ಯ ಜನವಸತಿಯತ್ತ ಹೊರಟಿರಬೇಕು, ಅವನಿಗೆ ವಸತಿ ಎಲ್ಲಿದೆ ಎಂಬುದು ಗೊತ್ತಿರಬೇಕು, ಇವನ ಜೊತೆ ಹೋದರೆ ತಮಗೂ ಬೇಕಾದ, ಹೊಲಸು, ರಾಡಿ, ಬಚ್ಚಲ ನೀರು ಹರಿಯುತ್ತಿದ್ದ ಸ್ಥಳಕ್ಕೆ ಮುಟ್ಟುವದು ಸಾಧ್ಯ, ಎಂಬ ನಂಬುಗೆಯಿಂದ ನನ್ನ ತಲೆ ಸುತ್ತಲೂ ಆವರಿಸಿ ಈ ನೊಣಗಳು ನನ್ನೊಡನೆಯೇ ಹೊರಟವು.

೨

ಸುತ್ತುಮುತ್ತಲು ಬೈಲು, ಸೆಜ್ಜೆಯ ಕೆಂಪು ಭೂಮಿ ಮತ್ತು ನಡುವೆ ಸುಸ್ತಾಗಿ ಬಿದ್ದಂಥ ಮೂವತ್ತು ಮೂವತ್ತೈದು ಮನೆಗಳಿದ್ದ ಬನಗರವಾಡಿ. ಹೆಚ್ಚಾಗಿ ಎಲ್ಲ ಮನೆಗಳ ಗೋಡೆಗಳು ಮಣ್ಣಿನವಿದ್ದು, ಕರೆಹಂಚಿನ ಛಪ್ಪರಗಳಿದ್ದವು. ಕೆಲವು ಮನೆಗಳು ಮೇಲ್ಮುದ್ದಿ ಹಾಕಿದ್ದವೂ ಇದ್ದವು. ಬಹುಶಃ ಎಲ್ಲ ಮನೆಗಳ ಇದುರು ಚಿಕ್ಕ ದೊಡ್ಡ ಅಂಗಳಗಳಿದ್ದವು. ಬಚ್ಚಲ ನೀರಿನಿಂದ ಬೆಳೆದ ನುಗ್ಗೆ ಮತ್ತು ಬೇವಿನ ಗಿಡಗಳಿದ್ದವು. ಮನೆಗಳ ಹಿಂದೆ ಜಾಲ ಮುಳ್ಳು ಹಾಕಿ ಕುರಿ ಇಡಲು ಮಾಡಿದ ದಡ್ಡಿಗಳಿದ್ದವು. ಎಲ್ಲಿಯೋ ಒಂದೆರಡು ಕಡೆ ಗೋಡೆಗಳಿಗೆ ಅನಿಸಿಇಟ್ಟ ಮುರುಕ ಗಾಲಿಗಳಿದ್ದವು. ಎಲ್ಲವೂ ಯಥಾಸ್ಥಿತಿ ಇತ್ತು. ಬನಗರವಾಡಿಯಲ್ಲಿ ಮಾರ್ಗಗಳು ಇರಲೇ ಇಲ್ಲ. ಮನೆಕಟ್ಟಿ ಉಳಿದ ಜಾಗಾ ದಾರಿಯೆಂದು ಜನ ಉಪಯೋಗಿಸುತ್ತಿದ್ದರು. ಅನೇಕ ಮನೆಗಳಿಗೆ ಕೀಲಿ ಇದ್ದವು. ಒಂದು ಮನೆ ಇದುರಿನ ಅಂಗಳದಲ್ಲಿ ಮೂರು ನಾಲ್ಕು ಹುಡುಗರು ಆಡುತ್ತಿದ್ದರು. ಧೂಳು ತುಂಬಿದ ದಾರಿ ಯುದ್ದಕ್ಕೂ ಮನೆಗಳು ನೆರಳು ಅಡ್ಡಾಗಿ ಬಿದ್ದಿದ್ದವು. ಅದರಲ್ಲಿ ಕೆಲವು ನಾಯಿ, ಕರಿ ಬಿಳಿ ಕೋಳಿಗಳು ಕಣ್ಣು ಮುಚ್ಚಿ ಕೂತಿದ್ದವು.

ಎಡಬಲ ಮನೆಗಳಿದ್ದವು. ಮನೆಯೊಳಗಿಂದ ಹೆಂಗಸರು ಬಾಗಿ ನೋಡುತ್ತಿದ್ದರು. ನನ್ನನ್ನು ಕಂಡು ಹುಡುಗರು ಓಡಿ ಹೋದರು. ಸ್ವಲ್ಪ ಮುಂದೆ ಹೋದ ಮೇಲೆ ಒಂದು ಬೈಲಿತ್ತು. ಅದರಲ್ಲಿ ಒಂದು ಬೇವಿನ ಗಿಡ ಮತ್ತು ಅದರ ಸುತ್ತು ಒಂದು ಕಟ್ಟೆ ಇತ್ತು. ಅದರ ತಂಪು ನೆರಳನ್ನು ಕಂಡೊಡನೆ, ಕಾದು ಬೆಂದ ಕೋಳಿಯಂತೆ ನಾನೂ ಆ ನೆರಳಲ್ಲಿ ಹೋಗಿ ಕೂತೆ, ಟೊಪ್ಪಿಗೆ ತೆಗೆದು, ಬೆವರನ್ನು ಒರಿಸಿಕೊಂಡೆ. ಪಾದಗಳಿಗೆ ಹತ್ತಿದ ಧೂಳನ್ನು ಝಾಡಿಸಿದೆ. ತಂಪಾದ ನೆರಳಲ್ಲಿ ಬೆವರು ಒಣಗಿ ಹೋಗಿ ಮನಸಿಗೆ ಸಮಾಧಾನವೆನಿಸಿತು.

ಹೊಟ್ಟೆ ಹಸಿದಿತ್ತು. ನೀರು ಎಲ್ಲಿ ಸಿಗುವದೆಂಬುದು ಗೊತ್ತಿರಲಿಲ್ಲ. ಕೇಳಬೇಕೆಂದರೆ ಯಾರೂ ಕಾಣಲಿಲ್ಲ. ಹಾಗೆ ರೊಟ್ಟಿ ತುಣುಕು ತಿನ್ನಬೇಕೆಂದರೆ, ಹಸಿವಿನಷ್ಟೇ ನೀರಡಿಕೆಯೂ ಆಗಿತ್ತು; ಬಾಯಿ ಆರಿ ಉಪ್ಪುಪ್ಪಾಗಿತ್ತು. ತಂಪು ನೆರಳು ಬಿಟ್ಟು ಏಳಬೇಕೆಂದೆನಿಸುವಲ್ಲದು ಮೊಣಕಾಲುಸುತ್ತ ಕೈಹಿಡಿದು ಹಾಗೇ ಸುಮ್ಮನೆ ಕೂತೆ. ಸುತ್ತಲೂ ಯಾವ ಸದ್ದಿರಲಿಲ್ಲ. ನೆತ್ತಿಯ ಮೇಲಿದ್ದ ಟೊಂಗಿಯ ಮೇಲೆ ಎರಡು ಕಾಗೆ ಕೂತಿದ್ದವು. ಅವೂ ಸದ್ದಿಲ್ಲದೆ ಹಾಗೆ ಕೂತಿದ್ದವು.

ಸ್ವಲ್ಪ ಹೊತ್ತಾದ ಮೇಲೆ ನಾ ಬಂದ ದಾರಿಯಲ್ಲೇ ಬರುತ್ತಿದ್ದ ಒಬ್ಬನನ್ನು ಕಂಡೆ. ಮನಸಿಗೆ ಕೊಂಚ ಸಮಾಧಾನವೆನಿಸಿತು. ಆವ ಹತ್ತಿರ ಬಂದ ಮೇಲೆ, ಅವನನ್ನು ಕರೆದು

ನಾ ಬಂದ ಕಾರಣ ಹೇಳಿ, ನೀರು ಎಲ್ಲಿ ಸಿಗುವದು ಎಂದು ಕೇಳಬೇಕು ಮತ್ತು ನೀರು ತಂದು ರೊಟ್ಟಿ ತಿನಬೇಕು ಎಂದು ಅಂದುಕೊಂಡೆ; ಅಷ್ಟರಲ್ಲಿ ಅವ ಊರು ಸೇರೇ ಬಿಟ್ಟು, ನನ್ನ ಹತ್ತಿರ ಬಂದೂ ನಿಂತ.

ಅವನ ತಲೆಯ ಮೇಲೆ ಕೆಂಪು ಪಟಕಾ ಇತ್ತು. ಮತ್ತು ಆತ ನಿಲುವಂಗಿ ಧರಿಸಿದ್ದ. ಕೈಯಲ್ಲಿ ಧೋತರದ ಚುಂಗು ಮತ್ತು ಬರ್ಚಿ ಹಿಡಿದಿದ್ದನು. ಅವನ ಮುಖ ದೊಡ್ಡದೂ ಇತ್ತು, ಉದ್ದನೂ ಇತ್ತು. ಗಲ್ಲದ ಮೇಲಿನ ಎಲುಬು ಒಡೆದು ಕಾಣುತ್ತಿದ್ದವು. ಮೂಗು ನೀಟಾಗಿತ್ತು. ಕಂದಿ ಬಣ್ಣದ ಮೀಸೆ ಹೊಗೆಸುತ್ತಾದಂತೆ ಇದ್ದವು. ಸ್ವಲ್ಪ ಸಂಕೋಚ ತೋರದೆ, ಅವನು ತನ್ನ ಕಂದು ಬಣ್ಣದ ಕಣ್ಣಿನಿಂದ, ನನ್ನನ್ನು ನೇರವಾಗಿ ನೋಡಿ, ಮೀಸೆಗಳ ಮೇಲೆ ಕೈಯಾಡಿಸುತ್ತ ಧೂಳಿಯಲ್ಲಿ ಪಿಚ್ಚೆಂದು ಉಗುಳಿದನು. ನನ್ನ ಮುಖದ ಮೇಲೆ ಉಗುಳಿದಂತೆ ನನಗೆನಿಸಿತು. ನಾನು ಕಾಲು ಕೆಳಗೆ ಬಿಟ್ಟು, ಸುಮ್ಮನೆ ಅತ್ತಿತ್ತ ನೋಡ ಹತ್ತಿದೆ.

ಬೆದರಿಸುವ ದನಿಯಲ್ಲಿ ಅವನು ಕೇಳಿದನು, "ನೀ ಏನು ತತ್ತಿ ಮಾರಾವ ಏನು?"

ಅವನ ಪ್ರಶ್ನೆ ಕೇಳಿ ನನಗೆ ಕಪಾಳಕ್ಕೆ ಹೊಡೆದ್ಹಾಂಗ ಅನಿಸಿ ನನ್ನ ಮುಖ ಬಾಡಿತು. ಒಂದು ಕ್ಷಣ ಅವಗೇನು ಹೇಳಬೇಕೆಂಬುದು ತೋಚಲೆ ಇಲ್ಲ. ನನ್ನ ಪಾಯಜಮಾ ನೋಡಿ, ಅವ-ಓಯಾಳಿಸಿ ಈ ರೀತಿ ಕೇಳಿರಬೇಕು. ಚಿಲ್ಲರೆ ಕಟ್ಟಿಕೊಂಡು ತತ್ತಿ ಖರಿದಿ ಮಾಡಿಕೊತ ಅಡ್ಡಾಡೊ ತುರ್ಕ ನಾನು ಎಂದು ಅವ ತಿಳಿದಿರಬೇಕು. ಎದೆಗುಂದಿ ನಾ ಗೊಂದಲದಾಗ ಬಿದ್ದೆ. ಮುಖದ ಮ್ಯಾಲೆ ಸುಳ್ಳ ನಕ್ಕಾಂಗ ಮಾಡಿ, ಕೆಳಗೆ ಬಿಟ್ಟ ಕಾಲು ಮ್ಯೇಲಕ್ಕೆ ತಗೊಂಡು, ತಲಿಮ್ಯಾಲಿನ ಟೊಪ್ಪಿಗೆ ಸರಿಪಡಿಸಿ ನಾ ಅಂದೆ, "ಇಲ್ಲ, ನಾ ಮಾಸ್ತರ ಇದ್ದೇನೆ."

ನನ್ನ ಉತ್ತರ ಕೇಳಿದರೂ, ತಾ ಮಾಡಿದೆ ಪ್ರಶ್ನೆ ತಪ್ಪು ಅಂತ ಅವನಿಗೆ ಅನಿಸಿದಂತೆ ಕಾಣಲಿಲ್ಲ. ಅವ ಎಡಗಾಲ ಮೇಲಿದ್ದ ಭಾರವನ್ನು ಬಲಗಾಲ ಮೇಲೆ ಹೇರಿ ಅಂದನು, "ಮಾಸ್ತರ !"

ನಾ ಮಾಸ್ತರ ಅಂತ ಅವ ನಂಬಿದ್ದಿಲ್ಲ. ಧೂಳಾದ ಪಾಯಜಮಾ, ಗೆರಿಗೆರಿ ಶರ್ಟು ಹಾಕಿದ ಈ ಪುಟ್ಟ ಆಸಾಮಿ ಮಾಸ್ತರ ಆಗುವದೆಂತು? ಲಂಗೋಟಿ ಹಾಕಿ ಯಾವಾ ಸಾಲಿಗೆ ಹೋಗಬೇಕು, ಉಗುಳಿಲೆ ಪಾಟಿ ಒರಿಸಬೇಕು, ಆ ಹುಡುಗ ಮಾಸ್ತರ ಅಂತ ಅನ್ನಾವರಾರ ಯಾರು? ಹಾಂಗಂದರೂ ಇವನ್ನ ಮಾಸ್ತರ ಮಾಡಾವರಾರ ಯಾರು? ಛೀಃ ! ಏನಾರ ಹೇಳತಾನ ಆತು !

ನಾನು ಸಣ್ಣವನಿದ್ದ ಬಗ್ಗೆ ಮತ್ತು ಕೋಟು ಹಾಕದೆ ಧೋತರ ಉಡದೆ ಇದ್ದ ಬಗ್ಗೆ ನನಗೆ ದುಃಖವಾಯಿತು. ಆದರೂ ಮಾತಿನಲ್ಲಿ ಸ್ವಲ್ಪ ಜೋರು ತಂದಂದೆ,

"ಹೌದು, ಹೊಸದಾಗಿ ನನ್ನನ್ನು ಇಲ್ಲಿ ನೇಮಿಸಿದ್ದಾರೆ. ಇವತ್ತಿನಿಂದ ಹಾಜರಾಗ ಲಿಕ್ಕ ಅಂತ ಬಂದೇನಿ !"

ಅಡ್ಡ ಹಿಡಿದ ಬರ್ಚಿ ಉದ್ದಕ್ಕೆ ಮಾಡಿ ತುಚ್ಛತೆಯಿಂದ ಅಂದನು, "ಹೂಂ! ಮಾಸ್ತರನ್ನ ತಗೊಂಡು ಈ ಊರಾಗ ಏನು ಮಾಡೊದ ಅದ? ಇಲ್ಲಿ ಸಾಲಿ ಎಲ್ಲಿ ಅದ? ಈ ಹಟ್ಟ್ಯಾಗ ಹುಡುಗರಾರ ಎಲ್ಲಿ ಅವ? ಸರಕಾರಕ್ಕೆ ಈ ಮಾತು ಗೊತ್ತಿಲ್ಲವೇ? ಹುಚ್ಚು ಚ್ಯಾರ ನಡೆದಾದ.........

ಹೀಗಂದು ಪಟಕಾ ಸರಿಪಡಿಸಿ ಹೋಗಿ ಬಿಟ್ಟ. ಹೋಗೊ ಮುಂದೆ ಮತ್ತೊಮ್ಮೆ ಧೂಳಾಗ ಪಿಚ್ಚಿಂದು ಉಗುಳಿದ. ಕಿರಿದಾದ ಆ ದಾರಿಯಲ್ಲಿ ಅವನು ಹೋಗುವ ವರೆಗೆ, ಇನ್ನೊಮ್ಮೆ ಅವನತ್ತ ನೋಡುವ ಧೈರ್ಯವು ನನಗಾಗಲಿಲ್ಲ. ನನಗೆ ಮುಖಭಂಗ ವಾದಂತಾಯಿತು. ಸಾಲಿಗೆ ಹರಕ ಚಡ್ಡಿ ಹಾಕ್ಕೊಂಡು ಹೋದಾಗ, ಅದಕ್ಕಿಂತ ಸತ್ತರ ನೆಟ್ಟಗೆ ಎಂಬ ಭಾವನೆ ಬರುತ್ತಿತ್ತು; ಹಾಗೆ ಈಗ ಅನಿಸಿತು. ಈ ಒಂದೇ ಪ್ರಸಂಗವು ನನ್ನ ಧೈರ್ಯ, ಸಾಹಸ, ಹುಮ್ಮಸುಗಳನ್ನೆಲ್ಲ ಕರಗಿಸಿತು. ಹೀಗೆ ತಿರುಗಿ ಹೋಗಿ, ನೌಕರಿಗೆ ರಾಜಿನಾಮೆ ಕೊಡಬೇಕೆಂದನಿಸಿತು. ಇಲ್ಲಿ ಹುಡುಗರು ಬರೊಹಾಂಗಿಲ್ಲ, ಸಾಲೆ ನಡಿಯೊ ಹಾಂಗಿಲ್ಲ, ಮಾಸ್ತರ ಅಥವಾ ಶಿಕ್ಷಣದ ಪ್ರಯೋಜನವೂ ಇಲ್ಲ ಎಂದೆನಿಸಿ, ಇಲ್ಲಿ ಹೊಂದಿ ಕೊಳ್ಳುವದು ಅಸಾಧ್ಯವೆಂದೆನಿಸಿತು. ನಾನು ಮಖೀನನಾಗಿ ಮತ್ತೆ ಕಟ್ಟೆಯ ಮೇಲೆ ಕೂತೆ. ಬೆಸುಗೆಯಲ್ಲಿ ಬೆಂದು ಹೋಗುವ ಈ ಊರಿಗೆ ನಾನೇಕೆ ಬಂದೆ, ಎಂದನಿಸಿ ನನ್ನ ಒಬ್ಬಂಟಿಗತನ ಭಯಾನಕವೆನಿಸ ಹತ್ತಿತ್ತು.

ಸ್ವಲ್ಪ ಹೊತ್ತಿನ ಮೇಲೆ ಬೆಳ್ಳನೆ ಮೀಸೆಯ ಮುದುಕನೊಬ್ಬನು ಬಡಿಗೆಯನ್ನೂ ರುತ್ತ, ಅಡವ್ಯಾಗಿಂದ ಬಂದನು. ಅವನ ಹುಬ್ಬೂ ಬೆಳ್ಳಗಾಗಿದ್ದವು, ಹೆಗಲ ಮೇಲಿನ ಕಂಬಳಿಯನ್ನು ಬೆಳ್ಳಿ ಕಡೆ ಇದ್ದ ಕೈಯಿಂದ ಹಿಡಿದಿದ್ದನು. ಮುಚ್ಚಿ ಜಗ್ಗುತ್ತ ನನ್ನ ಹತ್ತಿರ ಬಂದನು. ಹಣೆಯ ಮೇಲೆ ಕೈಹಿಡಿದು ನನ್ನನ್ನು ದಿಟ್ಟಿಸಿ ನೋಡಿದನು, ತಪ್ಪಿಸಿಕೊಂಡ ಕುರಿಯ ಗುರುತು ಹಿಡಿಯಲು ದಿಟ್ಟಿಸಿ ನೋಡಿದಂತೆ ನನ್ನ ಕಡೆ ನೋಡಿ ಅಂದನು,

"ಇಲ್ಯಾಕೊ ಕೂತಿಯೊ ಹುಡುಗ?"

"ನಾನು ಮಾಸ್ತರ; ನಿಮ್ಮೂರ ಸಾಲಿಗೆ ನನ್ನ ನೇಮಿಸ್ಯಾರ,"

"ಅಯ್ಯೋ, ಮಾಸ್ತರ ಇದ್ದರೆ, ಹೀಂಗ ಇಲ್ಯಾಕ ಕೂತಿದಿ? ಸಾಲ್ಯಾಗಕೂಡಲ್ಲ."

ಮುದುಕನ ಮಾತು ಕೇಳಿ ನನಗೆ ಧೈರ್ಯ ಬಂದಿತು. ಆಗಳೆ ಹೋದ ಬರ್ಚಿ ಹಿಡಿದಾವನ್ಹಾಂಗ ಇವ ಇಲ್ಲ ಅಂತೆನಿಸಿತು.

"ಸಾಲಿ ಎಲ್ಲಿ ಅವ, ಅವ ನನಗೆ ಗೊತ್ತಿಲ್ಲ."

ಕೈಯಾಗಿನ ಬಡಗಿಲೆ ಉದ್ದಕಿದ್ದ ಚಾವಡಿ ತೋರಿಸಿ ಮುದಕ ಅಂದನು,

"ಅದ ಅಲ್ಲೇನು ಸಾಲಿ—ಚಾವಡ್ಯಾಗಿನ ಎರಡು ಅಂಕಣ !"

"ಇದ?"

"ಹೌದು, ಅಲ್ಲಿ ಹೋಗಿ ಕೂಡು !"

"ಒಬ್ಬನ ಕೂತ ಏನ ಮಾಡಲಿ? ಹುಡುಗರ ಎಲ್ಲಿ ಅವ?"

"ಹುಡುಗರ ಹೋಗ್ಯಾವ ಕುರಿ ಹಿಂದೆ. ತಿರುಗಿ ಬರತಾರಲ್ಲ. ಅವರೇನು ಅಡವ್ಯಾಗ ಉಳಿತಾರ?"

"ಸಾಲಿ ತುಂಬೊವಷ್ಟರ ಅವ ಏನು?"

"ಅದಾವ, ರಗಡ ಅದಾವ, ಮತ್ತ ಹೊಸವೂ ಹುಟ್ಟತಾವಲ್ಲ. ವರ್ಷ ಎಂಟು ಹತ್ತು ಮದುವಿ ನಡದ ನಡಿತಾವ. ಮಕ್ಕಳು ಆಗೇ ಆಗತಾವೆ. ನೀ ನಿನ್ನ ಕೆಲಸ ಮಾಡು, ಅಂದರಾತು !"

ಅವನ ಮಾತು ಕೇಳಿ ನನಗೆ ನಗೆ ಬಂತು. ಕಟ್ಟಿ ಕೆಳಗ ಜಿಗಿದು, ನಾ ಕೈಯಾಗ ಚೀಲಾ ತಗೊಂಡು ಅಂದೆ,

"ನೀರು ಎಲ್ಲಿ ಐತಿ ಹೇಳು. ಅಂದರ ಊಟಾ ಮಾಡತೇನಿ. ಮನ್ಯಾಗಿಂದ ರೊಟ್ಟಿ ತಂದೇನಿ."

ಮುದುಕ ಅಂದ, "ನೀರಿನ ಬೊಬ್ಬಾಟ ಮಾತ್ರ ಐತಿ ಈ ಊರಾಗ. ಬ್ಯಾಸಗ್ಯಾಗ ನೀರು ಪೂರಾ ಬತ್ತೆ ಹೋಗತೈತಿ. ಒಂದು ಬಾವಿ ಐತಿ ನೋಡು ಅತಲಾಗ—ನಾನು ಆ ಓಣ್ಯಾಗಿಂದ ಮುಂದೆ ನೋಡಿದೆ. ಊರ ಹೊರಗೆ ಗಚ್ಚು ಕಲ್ಲಿನಿಂದ ಕಟ್ಟಿದ ಒಂದು ಬಾವಿ ಇತ್ತು.

"ಕುರುಬರ ನೀರು ನಡಿತಿದ್ದರ ಹೇಳು, ಕೊಡತೇನಿ"

"ಅದ್ಯಾಕ ನಡಿಯೊದಿಲ್ಲ? ಆದರ ತಂಬಿಗಿ ಕೊಟ್ಟರ ನಾನ ತಗೊಂಡ ಬರತೇನಿ"

ಮುದಕ ನಿಂತಲ್ಲಿಂದ ಒದರಿದ,

"ಏ, ಅಂಜೀ, ನೀರ ತುಂಬಿಕೊಂಡು ಚರಗಿ ತಗೊಂಡು ಬಾ. ಮಾಸ್ತರಗ ಬೇಕಾಗೈತಿ."

ಆ ಓಣ್ಯಾಗಿನ ಒಂದ ಮನ್ಯಾಗಿಂದ ಯಾರೋ ಹೆಣಮಗಳು ಹಣಕಿ ಹಾಕಿ ನೋಡಿ ದಳು. ಮುದುಕ ಒದರಿ ಇನ್ನೊಮ್ಮೆ ಅದೇ ಮಾತ ಹೇಳಿದ. ನಾವಿಬ್ಬರೂ ಸಾಲಿ ಹತ್ತರ ಬಂದೆವು. ತಾಲೂಕಿನ ಶಿಕ್ಷಕನು ನನ್ನ ಕಡೆ ಈ ಸಾಲಿ ಕೀಲಿಕೈ ಕೊಟ್ಟಿದ್ದನು. ಅವ ಹೇಳಿದ್ದ,

"ಚಾರ್ಜ ಕೊಡುವಂಥದ್ದು ಏನೂ ಇಲ್ಲ. ಹುಡುಗರ ಇಲ್ಲ, ಅಂದ ಮೇಲೆ ಅದೆಂಥ ಸಾಲಿ? ಕೀಲಿಕೈ ತಗೊಂಡು ಹೋಗು. ನಾನು ಚಾರ್ಜ ಕೊಟ್ಟೆನಿ ಅಂತ ರಿಪೋರ್ಟಮಾಡತೇನಿ."

ಕೀಲಿ ತೆಗೆದು ಕೋಣೆಯನ್ನು ತೆರೆದೆ. ಕೆಟ್ಟ ವಾಸನೆ ಬರಹತ್ತಿತ್ತು. ನೆಲದಲ್ಲೆಲ್ಲ ತಗ್ಗು. ನೆಲದ ಮೇಲೆ ತುಂಬಾ ಧೂಳು ಮತ್ತು ಗುಬ್ಬಿ ಹೇಸಿಗೆ.

ಹೆಗಲ ಮೇಲಿದ್ದ ಕಂಬಳಿಯನ್ನ ಮುದುಕ ನೆಲದ ಮೇಲಿದ್ದ ಕಸ. ಧೂಳು ಝೂಡಿಸಿದ. ಧೂಳು ನನ್ನ ಮೈ ಮೇಲೆ ಬಂದಿತು, ಮೂಗಿನಲ್ಲಿ ಸೇರಿ ನಾ ಕೆಮ್ಮು ಹತ್ತಿದೆ.

ಸ್ವಲ್ಪ ಜಾಗಾ ಸ್ವಚ್ಛವಾದ ಮೇಲೆ ಮುದುಕ ಕಂಬಳಿ ಹಾಂಗ ಒಗದು ಅಂದ,

"ಕೂಡು."

ಕೈಮ್ಯಾಲೆ ಒಜ್ಜೆ ಹಾಕಿ ಮುದುಕ ಕೆಳಗೆ ಕೂತ. ಕೋಲನ್ನು ಅಡ್ಡಿಟ್ಟು ಅಂದ,

"ಬಿಚ್ಚು ಇನ್ನ ರೊಟ್ಟಿ ಗಂಟು. ಹುಡುಗಿ ಈಗ ನೀರಿನ ಚರಗಿ ತಗೊಂಡ ಬರತಾಳ !"

ಚೀಲ ಬಿಚ್ಚಿ ಹಳೆ ಧೋತಾರದ ಅರವ್ಯಾಗ ಕಟ್ಟಿದ ರೊಟ್ಟಿ ಗಂಟನ್ನು ಹೊರಗೆ ತಗದೆ.

"ಯಜ್ಜಾ, ನೀನೂ ತಿಂತಿ ಏನು?"

ಮುಖದ ಮೇಲೆ ನೀರಿಗೆ ಬಿದ್ದ ಮುದುಕ ನಗುಮುಖವಾಗಿ ಅಂದ, "ಇಷ್ಟೊತ್ತನಕ ನಾ ತಿನ್ನದೆ ಇದ್ದೇನೇನು? ಈಗಾಗಳೆ ಎರಡು ಸಾರಿ ತಿಂದು, ಮೂರನೆ ಸಾರಿ ತಿನ್ನೊ ಹೊತ್ತಾಗ್ಯದ, ನೀ ತಿನ್ನು !"

ನನಗೆ ಸಂಕೋಚ ಅನಿಸಿತು. ಅದರ ಹೊಟ್ಟೆ ಕೇಳತಿರಲಿಲ್ಲ. ಅಷ್ಟರಾಗ ಕರ್‍ರನ ಹುಡುಗಿ ಬಂದಳು; ಹೊತ್ತಲ ಹೊರಗೆ ನಿಂತು, ನೀರಿನ ಚರಗಿ ಇಟ್ಟು, ಒಂದಕ್ಷಣ ನನ್ನನ್ನು ನೋಡಿ ಹೋದಳು.

ಮೊಣಕಾಲು ಮ್ಯಾಲೆ ಮಾಡಿ ಕೂತ ಮುದುಕ, ಟೊಂಕದಾಗಿಂದ ತಂಬಾಕದ ಚೀಲ ಹೊರಗೆ ತೆಗೆದು, ಅದರಾಗ ಕೈ ಹಾಕಿದ. ಹಸಿವೆಯಾದ್ದರಿಂದ ನಾನು ಲಗುಲಗು ರೊಟ್ಟಿ ತಿನ್ನತಾ ಇದ್ದೆ. ನಡುವೆ ಮುದಕನ ಕಡೆ ನೋಡತಾ ಇದ್ದೆ. ತಲಿಗೆ ಅರ್ಧ ರುಮಾಲು ಸುತ್ತಿದ್ದ, ಕೆಳಗೊಂದು ಧೋತರ ಇತ್ತು. ಉಳಿದ ಮೈ ಎಲ್ಲ ಬರಿದಾಗಿತ್ತು. ಯಾವ ಮಣ್ಣಾಗ ಅಡ್ಡಾಡತಿದ್ದ, ಯಾವ ಕುರಿ ಹಿಂಡಿನ ಹಿಂದಿಂದ ಅಡ್ಡಾಡತಿದ್ದ, ಅವ ಮಣ್ಣಿನ್ಹಾಂಗ, ಕುರಿಗಳ್ಹಾಂಗ ಅವನ ಬಣ್ಣನೂ ಕಪ್ಪಗಿತ್ತು. ಅವನ ಮೈಕಟ್ಟು ತೆಳ್ಳಗೆ ಇತ್ತು. ಮುಳ್ಳಿನಿಂದ ತೆರೆದ ಕಲೆಗಳು ಬರಿಗಾಲ ತುಂಬಾ ಇದ್ದವು. ಮುದುಕ ಹಣ್ಣಾಗಿದ್ದ. ಪಾರವಾಳದ ರೆಕ್ಕೆ ಹಾಂಗ ಹುಬ್ಬು, ದಟ್ಟಾದ ಬೆಳ್ಳನ್ನ ಮೀಸೆ ಮತ್ತು ಗಡ್ಡ ಇದ್ದು ಎದೆಯ ತುಂಬ ಉಂಗರ ಕೂದಲುಗಳಿದ್ದವು. ಅವನ ವಯಸ್ಸಿನ ಅಂದಾಜು ಹತ್ತುತ್ತಿರಲಿಲ್ಲ, ಆದರೂ ಅವ ಹಣ್ಣಾದದ್ದು ಕಾಣತಿತ್ತು. ಮುಖದ ತುಂಬ ನೀರಿಗೆ ಇದ್ದು, ಕೈಕಾಲಿನ ಮೇಲಿನ ನರಗಳೆಲ್ಲ ಉಬ್ಬಿದ್ದವು. ಅಲ್ಲಲ್ಲಿ ಗಂಟೂ ಕಟ್ಟಿದ್ದವು.

ಬಾಯಾಗ ತಂಬಾಕ ತುಂಬಿ, ಚೀಲಾ ಕಟ್ಟಿಕೊತ ಮುದುಕ ಅಂದ,

"ಯಾವೂರಾವ ನೀನು?"

"ನಾನು ವಿಭೂತಿವಾಡಿಯವ,"

"ಅಲ್ಲೆ ಯಾರಾವ ನೀನು?"

ನಾನು ಅವಶ್ಯವಿದ್ದ ವಿವರಗಳನ್ನೆಲ್ಲ ಹೇಳಿದೆ. ಅವನೂ ಅಲ್ಲಿಯ ತನ್ನ ಪರಿಚಯ ಸ್ಥರ ಹೆಸರುಗಳನ್ನು ಹೇಳಿದ.

"ಹಾಗಾರ ನೀನು ನಮ್ಮವನ ಆದಿ ಬಿಡು !" ಹೀಂಗ ಅಂದು ನನ್ನ ಬೆನ್ನ ಮೇಲೆ ಕೈಯಾಡಿಸಿ, ಉಗುಳಲಿಕ್ಕೆಂದು ಬಾಗಿಲಕಡೆ ಹೋದ.

ನನಗೂ ಸ್ವಲ್ಪ ಧೈರ್ಯ ಬಂತು. ಈ ಕುರುಬರ ಊರಾಗ ನಾ ಏನು ತೀರ ಒಬ್ಬಂಟಿಗನಾಗಿ ಇಲ್ಲ. ನನ್ನ-ಕಡೆ ಬಂದು ನನ್ನ ಕೂಡ ಪ್ರೀತಿಯಿಂದ ಮಾತಾಡುವನೂ ಇದ್ದಾನ. ಇವನ್ಹಾಂಗ ಇನ್ನ ಎಂಟು ಹತ್ತೂ ಜನ ಆದರ ನನ್ನ ಜೀವನ ಸುಖಕರವಾಗಬಹುದೆಂದು ಅನಿಸಿತು.

ಸ್ವಲ್ಪೊತ್ತಿನ ಮ್ಯಾಲೆ ಮುದುಕ ಹೋಗತೇನಿ ಅಂತ ಹೇಳಿ ಅಡವಿಗೆ ಹೋದನು. ಸಾಲ್ಯಾಗ ನಾ ಒಬ್ಬನ ಉಳಿದೆ, ಸಾಲಿ ತೋಲಿಮ್ಯಾಲೆ ಮೊದಲಿನ ಮಾಸ್ತರ ಅನೇಕ ಗಾದೆ ಮಾತು ಬರೆದಿಟ್ಟಿದ್ದ. ಪೂರ್ವ ಪಶ್ಚಿಮ ಎಂದು ದಿಕ್ಕುಗಳ ಹೆಸರುಗಳನ್ನು ಬಣ್ಣದ ಕಾಗದ ಮೇಲೆ ಬರೆದು ಗೋಡೆಗಳಿಗೆ ಅಂಟಿಸಿದ್ದವು ಇದ್ದವು. ಒಂದು ತೊಲಿಗೆ ಕಳ್ಳಿ ಕಟ್ಟಿದ್ದಿತ್ತು. ಅದರ ಮ್ಯಾರೆ ನೊರಜು ಗುಂಪಾಗಿ ಕೂತಿದ್ದವು. ಗೋಡ್ಯಾಗ ತೊಲಿಹತ್ತರ ಗುಬ್ಬಿಮನಿ ಮಾಡಿದ್ದವು. ಅದರೊಳಗಿಂದ ಹುಲಕಡ್ಡಿ, ಸಣಬು, ದಾರ ಜೋತ ಬಿದ್ದಿದ್ದವು. ಗುಬ್ಬಿ ಚಿಂವ ಚಿಂವ ಅನ್ನುತ್ತ ಹಾರಾಡುತ್ತಿದ್ದವು. ಒಂದು ಟೇಬಲ, ಖುರ್ಚಿ, ಒಂದು ಫಳಾ ಇಷ್ಟು ಸಾಹಿತ್ಯವಿತ್ತು. ಟೇಬಲಿಗೆ ಹೊಂದಿ ಒಂದು ಪೆಟ್ಟಿಗೆ ಇತ್ತು. ಅದನ್ನು ತೆರೆದೆ. ಒಳಗೆ ಫಳಾ ಒಂನುವ ಅರಿವೆ, ರೂಳ ಕಡಿಗೆ, ಹಳೇ ರಜಿಸ್ಟರ, ಹಾಜರಿಬುಕ್ಕು, ಖಡುವಿನ ಬರೀ ಪೆಟ್ಟಿಗೆ, ದೌತಿ, ಟಾಕು ಮತ್ತು ಕೆಲವು ಕೆಲಸಕ್ಕೆ ಬಾರದ ಸಾಮಾನಗಳಿದ್ದವು.

ಚೀಲದಾಗಿನ ಚಾದರ ಹೊರಗೆ ತೆಗೆದು ಹಾಸಿದೆ. ನೊರಜಿನ ಕಾಟ ತಪ್ಪಿಸಲಿಕ್ಕೆ ಮುಖ ಧೋತರದಿಂದ ಮುಚ್ಚಿಕೊಂಡು ಅಡ್ಡಾದೆ. ಹೀಂಗ ಒಬ್ಬನ ಮಲಗೂ ರೂಢಿ ನನಗೆ ಇದ್ದ ಇತ್ತು. ಇದೇನು ನನಗೆ ಹೊಸ ಅನುಭವವಾಗಿರಲಿಲ್ಲ. ಆದರೆ ತಮ್ಮವರು ಯಾರೂ ಇಲ್ಲದ, ಬಿಸಲಿನ ತಾಪದಿಂದ ಬೆಂದ ಊರಿನ ಮೂಲಕ ಮತ್ತು ಬರಿದಾದ ಸಾಲೆಯ ಮೂಲಕ ಈ ಒಬ್ಬಂಟಿಗತನವು ಹೆಚ್ಚು ತೀವ್ರವಾಗಿ ಅನಿಸುತ್ತಿತ್ತು.

ಗುಬ್ಬಿ ಚೀರಾಟ ನಡೆದ ಇತ್ತು. ಒಂದ ಗುಬ್ಬಿ ಚಿಂವ ಚಿಂವ ಅಂದರ ಸಹನ ಆಗತದ. ಅದರ ಹತ್ತಿಪ್ಪತ್ತು ಗುಬ್ಬಿ ಚೀರಾಡ ಹತ್ತಿದರೆ ಅದು ಸಹನವಾಗುವಂಥ ಮಾತಲ್ಲ. ಆದರೆ ಇದಕ್ಕೇನು ಉಪಾಯವಿದ್ದಿಲ್ಲ. ಬಾಗಿಲ ಮುಚ್ಚಿದರೂ ಗೋಡೆಯಲ್ಲಿದ್ದ ತೂತಿನೊಳಗಿಂದ ಅವು ಬಂದ ಬರತಿದ್ದವು. ಹಾಂಗ ಕಣ್ಣು ಮುಚ್ಚಿದೆ. ನಡೆದು ಬಂದ ದಣಿವು, ಹೊಟ್ಟೆ ತುಂಬ ಮಾಡಿದ ಊಟ ಮತ್ತು ತಂಪಾದ ನೆರಳು ಇವುಗಳಿಂದ ನನಗೆ ಗಾಢ ನಿದ್ದೆ ಹತ್ತಿತು.

೩

ಗಾಢ ನಿದ್ದೆಯೊಳಗಿಂದ ನಾ ಎಚ್ಚರಾದೆ. ಬಿದ್ದಲ್ಲಿಂದ ಬಾಗಿಲ ಹೊರಗೆ ನೋಡಿದೆ. ಸಂಜೆಯಾಗಿತ್ತು. ಅಡವಿಯೊಳಗಿಂದ ತಿರುಗಿ ಬರುವ ಕುರಿಗಳ ಶಬ್ದ ಕೇಳಿಸುತ್ತಿತ್ತು. ಬಹಳ ಹೊತ್ತು ಮಲಗಿದ್ದರೂ, ಏಳಬೇಕೆಂದನಿಸಲಿಲ್ಲ. ಕಾಲು ನೊಯುವುದು ಕಾರಣ ವಾಗಿತ್ತು. ಎರಡೂ ಕೈ ತಲೆ ಕೆಳಗಿಟ್ಟು ತೊಲೆಗಳತ್ತ ನೋಡುತ್ತ ಹಾಗೆ ಬಿದ್ದಿದ್ದೆ.

ಹೊರಗೆ ಕುರಿಗಳ ದನಿ ಹೆಚ್ಚಾಗತಾ ಇತ್ತು. ಕುರಿ ಕಾಯುವವರ ಎತ್ತರ ದನಿ ಸಮೀಪದಿಂದ, ದೂರಿಂದ ಕೇಳಿಸುತ್ತಿತ್ತು. ನಾಯಿನೂ ಒದರುತ್ತಿದ್ದವು. ಕಾಗಿ ಗುಬ್ಬಿಗಳ ಹಾರಾಟ ಚೀರಾಟ ಕೇಳಿಬರುತ್ತಿತ್ತು. ಒಟ್ಟ ಎಲ್ಲಾ ಕಡೆ ಗೊಂದಲವೇ ನಡೆದದ್ದು ಕೇಳಸತಾ ಇತ್ತು. ಮಧ್ಯಾನ್ನವೆಲ್ಲ ನಿರ್ಜೀವವಾದ ಈ ಊರು ಈಗ ಚೇತರಿಸಿಕೊಂಡಿತ್ತು. ಒಳ್ಳೇ ಜೋರಿನಿಂದ ಚೈತನ್ಯ ಹರಿಯುತ್ತಿತ್ತು.

ನಾನು ಹೊರಗೆ ಬಂದು ಅಂಗಳದಲ್ಲಿ ನಿಂತೆ. ಯಾವ ದಾರಿಗುಂಟ ನಾನು ಬಂದೆ ಅದೇ ದಾರಿಯಿಂದ ಬರ್ಚಿ ಹಿಡಿದವ ಮತ್ತು ಮುದುಕ ಬಂದರು. ದಾರಿಯುದ್ದಕ್ಕೂ ಕುರಿಗಳಿದ್ದವು. ಮುಖ ಕೆಳಗೆ ಮಾಡಿ ಈ ಪ್ರಾಣಿಗಳು ವೇಗದಿಂದ ನಡೆದಿದ್ದವು. ಅವುಗಳ ಖುರಗಳ ಸದ್ದು ಕೇಳಿಸುತ್ತಿತ್ತು. ಧೂಳು ಹಾರತಾ ಇತ್ತು. ಧೂಳಿಯ ಮೇಲೆ ನೂರಾರು ಖುರಗಳು ಮೂಡುತ್ತಿದ್ದವು. ಧೋತರ ಮೇಲಕ್ಕೇರಿಸಿ, ಕೋಲುಗಳನ್ನು ಹೆಗಲ ಮೇಲಿಟ್ಟು, ಬಾಯಿಂದ 'ತುರ್ರ ಬುರ್ರ' ಅಂತಾ ವಿಚಿತ್ರ ದನಿ ತೆಗೆಯುತ್ತ ಕುರಿಕಾಯಾವರು ಕುರಿ ಹಿಂಡುಗಳ ಹಿಂದಿನಿಂದ ಬರತಾ ಇದ್ದರು. ಹಿಂಡುಗಳ ನಡುವೆ ಕುರಿಮರಿಗಳೂ ಇದ್ದವು. ಹಿಂದೆ, ಮುಂದೆ ಎಡಕ್ಕೆ ಮತ್ತು ಬಲಕ್ಕೆ ತುಂಬಾ ಕೂದಲಗಳಿದ್ದ ನಾಯಿಗಳಿದ್ದವು.

ಪಶ್ಚಿಮ ದಿಕ್ಕು ಕೆಂಪಗಾಗಿತ್ತು. ಪೂರ್ವದತ್ತ ಗಾಳಿ ಬೀಸುತ್ತಿತ್ತು. ಕೆಂಪು ಪಶ್ಚಿಮ ದಿಂದ ನಿಲೀ ಪೂರ್ವದ ವರೆಗೂ, ಆಕಾಶದಲ್ಲಿ ಹಿಂಜಿದ ಅರಳಿ ಹಾಂಗ ಮೋಡಗಳು ತೇಲಾಡುತ್ತಿದ್ದವು. ಅಲ್ಲಿಯೂ ಬಿಳಿ ಕುರಿ ಹಿಂಡು ದಡ್ಡಿಗೆ ಹೊರಟಂತೆ ತೋರಿತು !

ಎಂಟು ಹತ್ತು ದಿವಸಗಳ ಹಿಂದೆ ಮರಿ ಹಾಕಿದ ಕುರಿಗಳು ವೇಗದಿಂದ ದಡ್ಡಿಗಳತ್ತ ಬರತ್ತಿದ್ದವು; ಇದೀಗ ಆ ಮರಿಗಳು ಕಾಲಮೇಲೆ ಸಿಲ್ಲಲು ಪ್ರಾರಂಭ ಮಾಡಿದ್ದವು. ತೆಳ್ಳನ್ನ ಗುಲಾಬಿ ನಾಲಿಗೆಗಳನ್ನು ಹೊರಗೆ ತೆಗೆದು ಆತುರದಿಂದ ಬೆಂಬೆಂ ಅನ್ನುತ್ತಿದ್ದವು; ತಾಯಿ ಯತ್ತ ಮರಿ ಕುಡಿಯಲು ಓಡಿಹೋದವು.

ಅಡವ್ಯಾಗಿಂದ ತಿರುಗಿಬಂದ ಕುರುಬರ ಹೆಣಮಕ್ಕಳು ಮನೆಮನೆಯಲ್ಲಿ ಒಲೆ ಹೊತ್ತಿಸಿದರು. ತೊಗರಿ ಕಟಿಗಿ ಛಪ್ಪರದಾಗಿಂದ ಹೊಗೆ ಮುಗಿಲಿನತ್ತ ಹೋಗ ಹತ್ತಿತ್ತು. ಕುರುಬರು ಕುರಿಗಳನ್ನು ದಡ್ಡಿಯಲ್ಲಿ, ಸೇರಿಸುವದರಲ್ಲಿ ತೊಡಗಿದ್ದರು.

ನೋಡನೋಡತಾನ ಕತ್ತಲಾಯಿತು. ಕುರಿಗಳ ಶಬ್ದ, ಕಾಗಿ ಗುಬ್ಬಿ ಚೀರಾಟ, ಜನರ ಕೂಗು ಮಾಯವಾದವು. ಮನೆಮನೆಗಳಲ್ಲಿ ಗುಬ್ಬಿ ಚಿಮಣಿ ಮಿಣಿಮಿಣಿ ಉರಿಯು ತ್ತಿದ್ದವು. ಮುಗಿಲಲ್ಲಿ ತಾರಗೆಗಳು ಮಿನುಗುತ್ತಿದ್ದವು. ತಂಗಾಳಿ ಮಂದವಾಗಿ ಬೀಸುತ್ತಿತ್ತು.

ಒಬ್ಬವ ಒಂದು, ಇದುರಿಗಿದ್ದ ಹನಮಂತ ದೇವರ ಗುಡಿಗೆ ಬಂದು, ದೀಪ ಹಚ್ಚಿಹೋದ. ಗುಡಿಗೆ ಹೋಗಿ ಆ ಬೆಳಕಿನಲ್ಲಿ ಕೂತು ರೊಟ್ಟಿ ತಿಂದು, ಹುಡುಗಿ ತಂದ ಉಳಿದ ನೀರು ಕುಡಿಯಬೇಕೆಂದೆನಿಸಿತು; ಆದರೆ ಈ ವಿಚಾರ ಕೃತಿಯಲ್ಲಿ ಬರಲಿಲ್ಲ. ಕಂಬಕ್ಕೆ ಆತು ನಾನು ಹಾಗೇ ಕತ್ತಲಾ ನೋಡಿಕೊತ ಕೂತೆ.

ಈ ಊರಿನಲ್ಲಿ ನನಗೆ ಮೂರು ವರ್ಷ ಕಳೆಯುವದಿತ್ತು. ಇಲ್ಲೇ ಉಳಿದು ಜನ ರೊಡನೆ ಬೆರೆಯುವದಿತ್ತು. ಅವರ ಪ್ರೀತಿ ನಂಬುಗೆಗಳನ್ನು ಗಳಿಸುವದಿತ್ತು. ಪ್ರತಿಷ್ಠೆ ಯನ್ನೂ ಪಡೆಯುವದಿತ್ತು. ಇದನ್ನೆಲ್ಲ ದೊರಕಿಸುವಾಗ ತಗ್ಗು ಬಿದ್ದ, ಗುಬ್ಬಿ ಹೊಲಸು ಮಾಡಿದ ನೆಲವನ್ನು ಸ್ವಚ್ಛ ಮಾಡಿ, ಹೊಲಸು ವಾಸನೆ ತುಂಬಿದ ಸಾಲೆಯನ್ನು ಸುಧಾರಿಸ ಬೇಕಾಗಿತ್ತು. ಹುಡುಗರನ್ನು ಕೂಡಿಸಿ, ಅವರಲ್ಲಿ ಸಾಲೆಯ ವಿಷಯದಲ್ಲಿ ರುಚಿ ಹುಟ್ಟಿ ಸುವದಿತ್ತು. ಆದರೆ ನನ್ನ ಚಿಕ್ಕ ವಯಸ್ಸು ಮತ್ತು ಕಿರಿದಾದ ದೇಹ ಈ ಸಾಹಸದಲ್ಲಿ ಅಡ್ಡ ಬರುವಂತಹವಿದ್ದವು. ಮೇಲಾಗಿ ಇದು ತುಂಬಾ ಹುಂಬರ ಊರು. ಹತ್ತು ಹುಡುಗರು ಸಹ ನಿಯಮಿತವಾಗಿ ಬಾರದ ಸಾಲಿ. ಇದನ್ನೆಲ್ಲ ನಾನು ಹೇಗೆ ಸಾಧಿಸಬಹುದು?

ಅಷ್ಟರಲ್ಲಿ ಹೆಜ್ಜೆಗಳ ದನಿ ಕೇಳಿಸಿತು. ಗುಡಿಯಲ್ಲಿಯ ಮಂದವಾದ ನಸು ಗೆಂಪಾದ ಬೆಳಕು ಹೊರಗೆ ಬರತಾ ಇತ್ತು. ಈ ಬೆಳಕಿನ ಹಿನ್ನೆಲೆಯಲ್ಲಿ ಒಂದು ಆಕೃತಿ ನನಗೆ ತೋರಿತು. ಯಾರೋ ಬಂದರು. ಇಷ್ಟೇ ಕತ್ತಲಲ್ಲಿ ಕಾಣತಾ ಇತ್ತು. ನನಗೆ ಎದೆಗುಂದಿದಂತಾಯಿತು.

"ಯಾರು? ಮಾಸ್ತರ ಏನು? ಕೂತೀದಿ!

ನಾನು ಮುದುಕನ ದನಿಯ ಗುರ್ತ ಹಿಡಿದೆ.

"ಹೌದು ಬರ್ರಿ"

"ರೊಟ್ಟಿ ತಿಂದ್ಯಾ?"

"ಇಲ್ಲ, ಇನ್ನ ತಿಂತೇನಿ,"

"ಆಡಿನ ಹಾಲು ತಂದೇನಿ."

ನೆಲದ ಮ್ಯಾಲೆ ಹಾಲಿಟ್ಟಿದ್ದು ಕೇಳಿಸಿತು. ಮುಂದೆ ಕೈಮಾಡಿದಾಗ ಹಾಲಿನ ಪಾತ್ರೆ ಕೈಗೆ ಹತ್ತಿತು.

ಅಷ್ಟರಾಗ ವಂತ್ಯಾರೋ ಬ್ಯಾಕರಿಸಿಕೋತ ಬಂದು, ಮೆಟ್ಟಲ ಮ್ಯಾಲೆ ಕೂತರು.

ಮುದುಕ ಕೇಳಿದ, "ಯಾವರು?"

"ನಾನರಿ, ಕಾರಭಾರಿ......

"ಯಾರು ಆನಂದಾ?"

"ಹೂಂ"

"ಹೌದ ಮಗನ, ಮಾಸ್ತರ ಕತ್ತಲಾಗ ಕೂತಾನ, ಮನಿಗೆ ಹೋಗಿ ಗುಬ್ಬಿ ಚಿಮಣಿ ನಾರ ತಗೊಂಡ ಬಾ,"

"ಯಾವ ಮಾಸ್ತರ?"

ಮೊದಲಿನಿಂದ ಯಲ್ಲಾ ಕಥೀ ಮುದುಕಗ ಹೇಳಬೇಕಾತು. ಯಾವ ಮಾಸ್ತರ, ಎಲ್ಲಿಂದ ಬಂದ, ಯಾಕ ಬಂದ, ಎಲ್ಲಿ ಆವ ಯಾರಾವ?...... ಈ ಎಲ್ಲಾ ಪ್ರಶ್ನೆಗೆ ಕಾರಭಾರಿ ಉತ್ತರ ಕೊಟ್ಟ. ಆನಂದ ಅವನ್ನೆಲ್ಲ ಕೇಳಿ ಚಿಮಣಿ ತರಲಿಕ್ಕೆ ಹೋದ. ಚರಗಿ, ಥಾಲಿ, ದೀಪ, ಹಾಸಗಿ ಇವೆಲ್ಲ ಅವಶ್ಯವಾದ ವಸ್ತುಗಳು. ನಾನ ಅವನ್ನೆಲ್ಲ ತರಬೇಕಾಗಿತ್ತು. ಅದರ ಲಕ್ಷದಾಗ ಬರಲಿಲ್ಲ.

ಆನಂದಾರಾಮೋಶಿ ಚಿಮಣಿ ತರಾಕ ಹೋದ, ಅವ ಬರೋದರೊಳಗ ಹತ್ತ ಹನ್ನೆರಡು ಜನ ಬಂದು ತಮ್ಮ ತಮ್ಮ ಕಂಬಳಿ ನೆಲದ ಮ್ಯಾಲೆ ಒಗೆದು, ಬೈಲಾಗ ಕೂತರು. ದನಿಯಿಂದ ತಮ್ಮ ತಮ್ಮ ಗುರ್ತಾ ಹಿಡಿದು ಹರಟೆ ಸುರುವಾದವು. 'ತೋಳ ಗವ್ಯಾಗ ಮರಿ ಹಾಕ್ಯದ, ಗವ್ಯಾಗ ಮನಿ ಮ್ಯಾಡದ, ಅಲ್ಲೆ ಹೋಗಿ ಅವನ್ನು ಕೊಂದರ, ಅವರ ಕಾಟ ಅದರ ತಪ್ಪೀತು...... ಅಂತಾ ಮಾತಾಡತಾ ಇದ್ದರು. 'ತೋಳ ಒಂದ ಕಡೆ ಇರೋ ಪ್ರಾಣಿ ಅಲ್ಲ, ಅದ್ಯಾಂಗ ಸಿಕ್ಕಿತು?' ಅಂತ ಇನ್ನೊಬ್ಬವ ಅಂದ. ಇನ್ನೊಬ್ಬವ ಅವನ ನಗಚ್ಯಾಟಿಗಿ ಮಾಡಿದ. ಇದೆಲ್ಲ ಆದ ಮೇಲೆ ಯಾವಂದೊ ಕುರಿ ಕೊಂದದ್ದು ತೋಳ ಅಲ್ಲ, ನಾಯಿ ಅಂತ ಇನ್ನೊಬ್ಬವ ಹೇಳಿದ, ಅದು ಯಾರ ನಾಯಿ ಅಂತಾನೂ ಹೇಳಿ ಮತ್ತು ನೋಡಿದವನ ತನಗ ಹೇಳ್ಯಾನ ಅಂತ ಅಂದ.

ರುಮಾಲು ಅಡ್ಡ ಹಿಡಿದು ಹಚ್ಚಿದ ಚಿಮಣಿ ತಗೊಂಡು ಆನಂದ ಬಂದ. ಆ ಬೆಳಕಿನ್ಯಾಗ ಬೈಲಾಗ ಹತ್ತು ಹನ್ನೆರಡು ಮಂದಿ ಕೂತದ್ದು ನೋಡಿದೆ. ಎಲ್ಲರೂ ಬರೆ ಮೈಲೆ ಇದ್ದರು. ಎಲ್ಲರ ಕಡೆ ದಪ್ಪ ಕಂಬಳಿ ಇದ್ದವು. ಕೆಲವರು ಕಂಬಳಿ ಹಾಕಿ ಕೂತಿದ್ದರು. ಕೆಲವರು ಕಂಬಳಿ ಹೊತಗೊಂಡು ಕೂತಿದ್ದರು.

ಚಿಮಣಿ ತಗೊಂಡು ಸಾಲ್ಯಾಗ ಹೋಗಿ ನಾನು ರೊಟ್ಟಿ ತಿಂದು ಹೊರಗೆ ಬಂದೆ.

"ರೊಟ್ಟಿ ತಿಂದ್ಯಾ?" ಕಾರಭಾರಿ ಕೇಳಿದ.

"ಹೂಂ" ನಾ ಅಂದೆ.

ಬ್ಯಾಕರಿಸೊದು ಕೇಳಿ ಸಭೆ ನಡೆದಿದೆಂದು ಅನಿಸಿತು. ಒಳಗಿದ್ದ ಚಿಮಣಿ ಹೊರಗೆ ತರಬೇಕೆಂದು ಅನಿಸಿತು. ಆದರೆ ಗಾಳಿಯಿಂದ ಆರಿಹೋಗಿತು; ಮೇಲಾಗಿ ಅದರ ಅವಶ್ಯಕತೆಯೂ ಅನಿಸಲಿಲ್ಲ.

ನನ್ನ ಹತ್ತರ ಕೂತ ಮುದುಕಗ 'ಬಾಳಾ' ಅಂತಾ ಕರೆಯುತ್ತಿದ್ದರು. ಈ ಮುದುಕ

ಊರ ಕಾರಭಾರಿ ಇದ್ದಾನ, ಅನ್ನೋದು ನಾ ತಿಳಕೊಂಡೆ. ಎಲ್ಲರೂ ಅವಗ ಕಾರಭಾರಿ ಅಂತ ಕರೆಯುತ್ತಿದ್ದರು.

ಕಾಣದಿರುವ ಆ ಸಭೆಯನ್ನುದ್ದೇಶಿಸಿ, ಸ್ವಲ್ಪ ಹೊತ್ತಿನ ವ್ಯಾಲೆ ಮುದುಕ ಅಂದ,

"ಮಾಸ್ತರ ಬಂದಾನ, ನಾಳಿಂದ ಹುಡುಗರನ್ನ ಸಾಲಿಗೆ ಕಳಸರಿ." ಒಬ್ಬವ ಬ್ಯಾಕರಿಸಿ ಉಗುಳಿದ,

"ಊರಾಗ ಹುಡುಗರ ಅದಾರ ಯಲ್ಲೆ?" 'ಕೆಳದನ್ಯಾಗ ಒಬ್ಬವ ಇನ್ನೊಬ್ಬವಾಗ ಅಂದ.

"ಊರ ಬಂಜೆಯಾಗ್ಯೆತಿ ಏನು?" ಒದರಿ ಕಾರಭಾರಿ ಕೇಳಿದ"

"ಹಾಂಗಲ್ಲ, ಅದರ ಸಾಲಿಗೆ ಹೋಗಾಕ ವ್ಯಾಳ್ಯಾ ಯಾರಿಗೆ ಐತಿ?"

"ಒಬ್ಬವನೂ ಇಲ್ಲ ಏನು? ಎಲ್ಲಾರೂ ಕೆಲಸದಾಗ ಅದಾರ ಅನ್ನು !"

"ಹಾಂಗಲ್ಲ, ಅದರ ಕುರಿ ಹಿಂಡಿನ ಹಿಂದೆ ಹೋಗತಾವ-ಖಾಲಿ ಯಾರ ಅದಾರ?"

ಈ ಪ್ರಶ್ನೆ ಉತ್ತರ ನಡೆದವು. ಒಂದು ಸ್ವಲ್ಪ ಗೊಂದಲಾನ ಎದ್ದಿತು. ಆಗ ನಾ ಅಂದೆ.

"ಆರು ವರ್ಷದ ಮೇಲಿನ ಹುಡುಗರು ಕುರಿ ಹಿಂಡಿನ ಹಿಂದ ಹೋಗತಾವ. ಅವೇನು ತಮ್ಮಷ್ಟಕ್ಕ ತಾವ ಹೋಗತಾವೇನು?"

"ಅವರ ಎಲ್ಲಿ ಹೋಗತಾರ? ಅಣ್ಣನ ಹಿಂದ ಹಾಂಗ ಅಡವ್ಯಾಗ ಹೋಗತಾವ ಆತು. ಸಣ್ಣವರಿದ್ದರ ಇಬ್ಬರು ಮೂವರು ಕೂಡಿ ಹೋಗತಾವ ಕುರಿ ಹಿಂಡಿನ ಹಿಂದ."

"ಹಾಂಗಾರ ಇಂಥ ಹುಡುಗರನ್ನ ಸಾಲಿಗೆ ಕಳಿಸಿರಿ. ಅವರಿಗೆ ಓದಲಿಕ್ಕೆ ಬರಲಿಕ್ಕೆ ಬಂದರ ಹಾನಿ ಅವರ ಆಗುವದಿಲ್ಲ. ಅವರ ಲಾಭಾನ ಆದೀತು."

ಬಾಯಾಗ ತಂಬಾಕ ತುಂಬಿಕೊಂಡ ಒಬ್ಬವನ ದನಿ ದೂರಿಂದ ಬಂತು-ಅವ ಅಂದ,

"ಅವರ ಹೊಟ್ಟೆ ಪಾಡೇನು?"

ಏನು ಉತ್ತರ ಹೇಳಬೇಕೆನ್ನುದು ನನಗ ಒಂದಕ್ಷಣ ಹೊತ್ತು ಹೊಳೆಯಲಿಲ್ಲ. ಹುಡುಗರ ಸಾಲಿಗೆ ಹೋದರ ಅವರ ಹೊಟ್ಟೆಗೆ ಯಾರ ಹಾಕಬೇಕೆಂಬ ಪ್ರಶ್ನೆ ನನಗಂತೂ ಬಂದಿರಲಿಲ್ಲ. ಅವರ ಹೊಟ್ಟೆಗೆ ತಾಯಿ ತಂದೆ ಹಾಕಬೇಕಾತವ ಅಂತೇ ನಾ ತಿಳಿದಿದ್ದೆ. ಅವರಿಗೆ ಮುದುಕ ಪರಭಾರೆ ಉತ್ತರ ಕೊಟ್ಟ,

"ಯಾವನಾರ ಹುಡುಗ ಹೊಟ್ಟೆಗಿಲ್ಲ ಅಂತ ಸಾಯಾಕ ಹತ್ತಿರದ. ನನ್ನ ಕಡೆ ಬರೀ. ಪಡಿ ಜೋಳ ಕೊಡತೇನಿ. ಬಾಯಲ್ಯಾ, ಎಲ್ಲ ಕೆಲಸದಾಗ ಅಡಗಾಲ ಹಾಕೋ ಚಟಾನ ಅವ ನಿನಗ. ಪಂತ ಸರಕಾರದವರು ಸಾಲಿಕೊಟ್ಟಾರ, ಮಾಸ್ತರ ನೇಮಿಸ್ಯಾರ—ಕಲಿಯಾಕ ಏನು ಗಂಟ ಹೋಗತ್ಯೆತಿ ನಿಮ್ಮದು?"

ಎಲ್ಲರ ದನಿ ಬದಲಾಯಿತು. ಯಾರ್‍ಯಾರ ಹುಡುಗರು ಬರಬಹುದೆಂಬ ಚರ್ಚೆ ನಡೆಯಿತು ನಮ್ಮ ಸದ್ಯಾ ಬರತಾನ, ನಮ್ಮ ಮಹಾದ್ಯಾನ ಕಳಸತೇನಿ, ತಿಪ್ಯಾ ಸಖ್ಯಾ ಅದಾರ—ಹೀಂಗ ಹತ್ತ ಹನ್ನೆರಡು ಹುಡುಗರ ಪಟ್ಟಿ ತಯಾರಾತು.

ಕಾರಬಾರಿ ಅಂದ,

"ಮಾಸ್ತರ ಆತಿಲ್ಲೊ ನಿನ್ನ ಮನಸಿನ್ಹಾಂಗ?"

ವಾದ ಮುಗಿತು. ನಡುವ ಇಬ್ಬರು ಮೂವರು ಮನಿಗೆ ಹೋಗಿ ಬಂದರು. ಇವರೆಲ್ಲ ಎದ್ದ ಹೋಗೊ ಹಾದಿ ನೋಡಕೂತ ನಾ ಕೂತೆ. ಆದರ ಅವರ ಮಾತ ನಡದ ಇದ್ದವು. ಮಳಿ ಗಾಳಿ ಕುರಿ ಆಡು, ನನ್ನದ್ಯಾಂಗ, ಅವನದ್ಯಾಂಗ—ಹೀಂಗ ಮಾತು ಸುರುವೂ ಇದ್ದವು. ಆಗ ನಾ ಕಾರಭಾರಿಗೆ ಸಾವಕಾಶ ಅಂದೆ,

"ನಾ ಹೋಗಿ ಮಲಗಲ್ಯಾ?"

"ಹೂಂ, ಮಲಗಲ್ಯ. ನಾಳಿಂದ ಹುಡುಗರು ಬರತಾವ. ಅದರ ಚಿಂತೀ ಮಾಡ ಬ್ಯಾಡ."

ಒಳಗೆ ಹೋಗಿ ಚಾದರಾ ಹಾರ, ಧೋತರಾ ಹೊತಕೊಂಡು ಬಿದ್ದೆ. ಚಿಮಣಿ ಆರಿಸಿದೆ. ಹೊರಗ ಮಾತ ನಡದ ಇದ್ದವು. ನಿದ್ದೀನೂ ಹತ್ತಿತು. ನಡುವೆ ಎಚ್ಚರಾಗಿ ಹೊರಗ ಹೋದಾಗ ಬೆಳದಿಂಗಳಿತ್ತು. ಚಂದಪ್ಪ ಕಂಡ. ಕೆಲವರು ಚಾವಡ್ಯಾಗ ಮಲ ಕೊಂಡಿದ್ದರು. ಕೆಲವರು ಬೈಲಾಗ ಕಂಬಳಿ ಹೊತಗೊಂಡು ಬಿದ್ದಿದ್ದರು. ಮುಗಿಲು ನಿಚ್ಚಳವಾಗಿತ್ತು. ಮೋಡಗಳಿದ್ದಿಲ್ಲ. ಅಂದಾದ ಬೆಳದಿಂಗಳ ಪಸರಿಸಿತ್ತು.

ಇದನ್ನೆಲ್ಲ ನೋಡಕೊತ ಹಾಗೆ ನಿಂತೆ. ಊರ ಹೊರಗ ದೂರ ಎರಡು ಛಪ್ಪರ ಕಾಣತಿದ್ದವು. ಅವುಗಳ ನೆರಳು ಬಿದ್ದಿತ್ತು. ನಡಓಣಿ ಆಚೆಗಿದ್ದ ಕಲ್ಲಿನ ಗುಂಪೊಂದು ಕಾಣತಿತ್ತು. ಅದರಾಚೆ ಬೈಲೆ ಬೈಲಿತ್ತು. ದೂರ ಹಬ್ಬಿದ ಬೈಲು ಮತ್ತು ಅದರಲ್ಲಿ ಮಸಕುಮಸಕು ಕಾಣುವ ಕಂಟಿ. ಬಿಸುಲಿನ ತಾಪ ಸಹಿಸದೆ, ತಂಪಿಗೆಂದು ನಾ ಬಂದು ಕೂತ ಬೇವಿನ ಮರ ಶಾಂತವಾಗಿ ನಿಂತಿತ್ತು. ಅದರ ತುದಿಯಲ್ಲಿ ನಾಲ್ಕು ಬೆಳ್ಳಕ್ಕಿಗಳು ಯಾವ ಸದ್ದೂ ಇಲ್ಲದೆ ಕೂತಿದ್ದವು.

೪

ನನಗೆ ಬಂದು ಹದಿನೈದು ದಿನಗಳಾಗಿದ್ದವು. ಆದರೂ ಇನ್ನೂ ಹುಡುಗರು ಸಾಲಿಗೆ ಬರತಿರಲಿಲ್ಲ. ಸಾಲಿ ಕೂಡತಾ ಇರಲಿಲ್ಲ. ಒಂದು ದಿನ ಮೂರು ನಾಲ್ಕು ಹುಡುಗರು ಬರತಿದ್ದರು. ತಾಸಾದ ಕೂಡಲೇ ಬೇಸರಾಗಿ ಹೋಗತಿದ್ದರು. ಒಂದಕ್ಕ ಹೋಗತೇವಿ ಅಂತ ಹೇಳಿ ಹೋದವರು ತಿರುಗಿ ಬರತಿರಲಿಲ್ಲ. ಯಾವನಾರ ಒಬ್ಬ ಹುಡುಗ ದಿನಾ ತಪ್ಪದ ಬರತಿದ್ದರ, ಅವನ ತಾಯಿ ಇಲ್ಲಿದರ ತಂದಿ, 'ರೊಟ್ಟಿ ತಿನ್ನಾಕ ಬಾ' ಅಂತ ಕರದು ಅವನ್ನ ಕುರಿಹಿಂಡಿನ ಹಿಂದ ಅಟ್ಟತಿದ್ದರು. ಇಂಥ ಹುಡುಗನಿಗೆ ಜಬರಿಸಿ 'ಹೀಂಗ್ಯಾಕ ಮಾಡತಿ ?' ಅಂತ ಕೇಳಿದರ ಅವ ಅಳಲಿಕ್ಕೆ ಸುರು ಮಾಡತಿದ್ದ. ಆಗ ಅವನ ತಾಯಿ ಬಂದು, "ಯಪ್ಪಾ ! ನಿನಗ ಮಕ್ಕಳ ಗಿಕ್ಕಳ ಅದಾವ ಇಲ್ಲೊ? ಸುಡುಗಾಡದಾಗ ಹೋಗಲಿ ನಿನ್ನ ಸಾಲಿ ! ನಡೀ ಮಂಗನಸಮನಿಗೆ..." ಅಂತಂದು ಕೈಹಿಡಿದು ಮಗನ್ನ ಕರಕೊಂಡು ಹೋಗವಳು ಹೀಂಗ ನಡಿದಿತ್ತು ಈ ಸಾಲಿ ! ದಿನ ಚಾವಡಿ ಇದುರಿಗೆ ರಾತ್ರಿ ಜನ ಕೂಡವರು. ಅವರ ಮುಂದ ಈ ಮಾತೆಲ್ಲ ಹೇಳಿದರ ಅವರ ಅನ್ನುವರು, "ಹುಡುಗರಿಗೆ ಇನ್ನೂ ರೂಢಾ ಆಗಿಲ್ಲ. ಇನ್ನ ವಾರ ಎರಡು ವಾರ ಹೋಗಲಿ." ವಾರ ಎರಡು ವಾರ ಹೀಗೆ ಹೋಗದ ನಾನಾರ ಏನ ಮಾಡಾವ ಇದ್ದೆ.

ಕಾರಭಾರಿ ನನಗೊಂದು ಮನಿ ಕೊಡಿಸಿದಾ. ಮೂರ ಕಲ್ಲಿಟ್ಟು ಒಲಿ ಮಾಡಿದೆ. ಆದಿತವಾರ ಊರಿಗೆ ಹೋಗಿ ಭಾಂಡಿ ಸಾಮಾನ ತಂದೆ. ಕೈಲೆ ಅಡಗಿ ಮಾಡಿ ಊಟ ಮಾಡಲಿಕ್ಕೆ ಹತ್ತಿದೆ.

ಒಂದು ದಿನ ರಾತ್ರಿ ದಾದೂ ಬರ್ಚಿ ಕೈಯಾಗ ಹಿಡಕೊಂಡು ಬಂದ. ನಾ ಚಿಮಣಿ ಬೆಳಕಿನ್ಯಾಗ ಹಾಸಿಗಿಗೆ ಆತು ಕೂತಿದ್ದೆ.

ಅವ ಬಂದು ಗುಡಾರಮ್ಯಾಲೆ ಕೂತ. ಬರ್ಚಿ ಮೂಲ್ಯಾಗ ನಿಂದರಿಸಿ ಅಂದ,

"ಈ ಮನಿ ನನ್ನ ಪಾಲಿಗೆ ಬಂತ ?"

ಈ ಜನರ ಒರಟಮಾತಿನ ರೂಢಿ ನನಗಾಗಿತ್ತು. ಬಹುವಚನ ಮಾತಾಡೊದು ಅವರಿಗೆ ಗೊತ್ತ ಇರಲಿಲ್ಲ. ಅದರಾಗೂ ಮಾತಿನ್ಯಾಗ ಪ್ರೀತಿ ಆದರಗಳು ಇದ್ದರ, ಅದೂ ಇಂಪ ಅನಸತದ, ಇಲ್ಲಂತಲ್ಲ. ಆದರ ಯಾವ ಬೇಕಾದ ಕುರುಬ ಬರಾವ, "ಯಾಕ ಮಾಸ್ತರ ?" ಅಂತ ಅಂದಾ ಅಂದರ ನನಗ ಕಸಿವಿಸಿಯಾಗತಿತ್ತು. ಅದರಾಗ ದಾದೂ ಹೀಂಗ ಅಂದ ಅಂದರ ಅನಕಾ ಹೊಟ್ಯಾಗ ಸಂಕಟಾನ ಬೀಳತಿತ್ತು.

ಜೇಬಿನ್ಯಾಗಿಂದ ಚಿಲಮಿ ತಗದು, ಅದರಾಗ ತಂಬಾಕ ತುಂಬಿದ. ಅದನ್ನ ಕಾಲ ಬೆರಳಾಗ ಹಿಡಿದ. ಕೈಯಾಗ ಚಕಮಕಿ ಹೊಡೆದು ಅರಳಿ ಹೊತ್ತಿಸಿದ. ಅದನ್ನ ಚಿಲಮಿ

ಬಾಯ ಮ್ಯಾಲಿಟ್ಟು ಶೇದಿ ಹೊಗೆ ಹೊರಗ ಬಿಟ್ಟ. ಹೊಟ್ಟ್ಯಾಗ ಹೊಗಿ ಹೋಗಿ ನನ್ನ ಕಣ್ಣಾಗ ನೀರು ಬಂದವು.

ಈ ಮನಷ್ಯಾ ಮೊದಲನೆ ಸಾರೆ ಭೆಟ್ಟಿ ಆದಾಗಿನಿಂದ ಅವನ ವಿಷಯದಲ್ಲಿ ನನ್ನ ಅಭಿಪ್ರಾಯ ಕೆಟ್ಟಾಗಿತ್ತು. ಹಾಂಗ ಅವನ ವಿಷಯ ಕೇಳಿದಾಗ, ಇವ ಮುಂದಿನ್ನ ಕಾಡಿಕೊತ ಇರಾವ ಅಂತ ತಿಳಿಯಿತು. ಊರಾಗ ಅವನ ವಜನೂ ಸ್ವಲ್ಪ ಇತ್ತು. ಸರಕಾರಿ ಅಮಲದಾರರ ಸಂಪರ್ಕ ಅವನ ಕೂಡ ಇತ್ತು. ಅವಗ ಓದಲಿಕ್ಕೆ ಬರಿಲಿಕ್ಕೆ ಬರತಿತ್ತು. ಅದಕ್ಕ ಜನರು ಅವನ ಸಲಹೆ ಕೇಳಲಿಕ್ಕೆ ಹೋಗತಿದ್ದರು.

ಬಾಯಾಗಿಂದ, ಮೂಗಿನ್ಯಾಗಿಂದ ಹೊಗಿ ಬಿಟ್ಟು, ಚಿಲಮಿ ಆರಿಸಿ ತಳಗಿಟ್ಟ. ಸುತ್ತಲೂ ಕಣ್ಣಾಡಿಸಿ ಅಂದ,

"ಮೊದಲಿನ ಮಾಸ್ತರ ಇಲ್ಲೇ ಇರತಿದ್ದ !"

ಆ ಮಾಸ್ತರ ಏನೋ ಕಿತಬಿ ಮಾಡಿದ್ದ, ಊರ ಜನರು ಅವನನ್ನು ಬಡೆದಿದ್ದರು ಅಂತ ಕೇಳಿದ್ದೆ. ಅದರ ನೆನಪಾಗಿ ಹೊಟ್ಟ್ಯಾಗ ಸಂಕಟಾಯಿತು. ಆದರೂ ಅದನ್ನೆಲ್ಲ ಮಾರಿಮ್ಯಾಲೆ ತೋರಸಾದ ಅಂದೆ,

"ಹೀಂಗೇನು ?"

ಆದರೂ ನನ್ನ ದನಿ ಬೆದರಿದ ಆಡಿನ್ಹಾಂಗ ಇತ್ತು.

"ತನ್ನ ನೋಕರಿ ನಿರಳ ಮಾಡೊದು ಬಿಟ್ಟು, ಅವ ಊರ ಹಿರೇತನಕ್ಕ ಹೊರಟ. ಹಾಂಗ ಮಾಡಕೊತ ಒಲಿತನಕೂ ಹೋದ. ನಾಲ್ಕಾರು ಸಾರಿ ಎಚ್ಚರಿಕೆ ಕೊಟ್ಟೆ. ಹೆಣಮಕ್ಕಳ ಕಡೆ ನೋಡಬ್ಯಾಡ, ಪರಿಣಾಮ ಕೆಟ್ಟ ಆದೀತು ಅಂತ ಹೇಳಿದೆ. ಆದರ, ಕೇಳಲಿಲ್ಲ. ತಾ ಸರಕಾರಿ ಮನಷ್ಯಾ, ಈ ಹುಚ್ಚಕುರುಬರು ಏನಮಾಡತಾವ, ಅಂತ ತನ್ನ ಗಮಜಿನ್ಯಾಗ ಇದ್ದ. ಈ ಹುಂಬ್ಚಿನಾಗ ಫುಕಟಹೋದ !"

ಹೀಂಗಂದು, ಖುಷಿ ಆಗಿ ಕೆಂಪಗಣ್ಣನ್ನು ನನ್ನತ್ತ ತಿರುವಿದ. ನಾ ಬೆದರಿದ್ದೆ. ಆದರೂ ಸಾವರಿಸಿಕೊಂಡೆ. ಮೂಲ್ಯಾಗಿನ ಬರ್ಚಿ ತಗೊಂಡು ಹತ್ತರ ಇಟಗೊಂಡು ಅಂದ,

"ನೀ ಹ್ಯಾಂಗ ಕೂತಿನೋಡು, ಹಾಂಗ ಅವನೂ ಕೂತಿದ್ದ. ನಾ ಬಂದು ಬರ್ಚಿ ಹಿಡಿಕಿಲೆ ಒಂದರ ಮ್ಯಾಲೊಂದು ಏಟು ಹಾಕಿದೆ, ತಳಕ್ಕ ಬೀಳೊತನಕ ಹೊಡೆದ. ಧೋತರದಾಗ ಉಚ್ಚಿ ಹೊಯಕೊಂಡ. ನನ್ನ ಕಾಲ ಹಿಡಿದ ಅಳಲಿಕ್ಕೆ ಹತ್ತಿದ. ಆದರ ನಾ ಸಿಟ್ಟಬೆಂಕಿ ಆಗಿದ್ದೆ ಹತ್ತಿಪ್ಪತ್ತು ಹೊಡೆತ ತಿಂದು ನೆಲದಮೇಲೆ ಸತ್ಹಾಂಗ ಬಿದ್ದ. ಆಗ ನಾ ಅವನ ಹೇಳಿದೆ, 'ಸುಮ್ಮನ ಹುಡುಗರಿಗೆ ಕಲಿಸಕೊತ ಇರು ! ಗುಂಡಾಗಿರಿ ಮಾಡಿದರ ಬರ್ಚಿಲೇನ ತಿವಿದೇನು !'

ದಾದೂ ಮೀಶಿಮ್ಯಾಲೆ ಕೈಎಳೆದು ಸಾಫ ಮಾಡಿ ಅಂದ,

"ಮಾಸ್ತರ ನಗಬ್ಯಾಡ. ಇದು ನಗೋ ಮಾತಲ್ಲ. ನೀ ಇನ್ನೂ ಈ ಊರಿಗೆ

ಹೊಸಬ. ನಿನ್ನ ಕೆಲಸ ನೀ ಮಾಡು. ಊರ ಮಾತನ್ಯಾಗ ಕೈಹಾಕಬ್ಯಾಡ. ಹುಡುಗರ ಬಂದರ ಕಲಿಸು. ಆದರ ಊರ ಜನರಿಗೆ ಕಲಿಸೊ ಭಾನಗಡ್ಯಾಗ ಬೀಳಬ್ಯಾಡಾ."

ನೆಲದ ಮ್ಯಾಲಿಟ್ಟ ಚಿಲಮಿ. ಚಕಮಕಿ ತಕ್ಕೊಂಡು ಜೇಬಿನ್ಯಾಗ ಹಾಕಿ, ಬರ್ಚಿ ಕೈಯಾಗ ಹಿಡಿದು ಎದಿಶಟಿಸಿ ಹೊರಬಿದ್ದ. ಕತ್ತಲದಾಗ ಕಾಣದ್ಹಾಂಗ ಆದ.

ಸ್ವಲ್ಪಹೊತ್ತು ನಾನು ಹಾಗೇ ಕೂತೆ. ನನ್ನ ಹಣಿ ಬೆವತಿತ್ತು. ಉಸಿರಗಟ್ಟಿದ್ಹಾಂಗ ಆತು. ಎದ್ದು ಬಾಗಿಲ ಮುಚ್ಚಬೇಕಂತ ಅನಿಸಿತು. ಆದರೆ ಆ ವಿಚಾರ ಕೃತಿಯಲ್ಲಿ ಬರಲಿಲ್ಲ.

ಇಪ್ಪತ್ತು ಇಪ್ಪತ್ತೆರಡು ವರುಷದ ದೊಡ್ಡಾಳು ಒಂದು ಕತ್ತಲದಾಗಿಂದ ಒಳಗ ಬಂತು. ಹೊತ್ಸಲ ಹತ್ತರ ಗೋಡಿಗೆ ಅತುಕೂತ. ಅವನ ಪರಿಚಯು ನನಗಿದ್ದಿಲ್ಲ. ಇಷ್ಟು ದಿನ ಆದರೂ ಅವನ್ನೇನು ನಾನು ಊರಾಗ ನೋಡಿದ್ದಿಲ್ಲ.

ಗೊಗ್ಗರ ದನಿಲೆ ನಾ ಕೇಳಿದೆ,

"ಯಾರವರು ?"

"ನಾ...ಆಯುಬೂ"

ಇವರಿಂದ ನನಗೆ ಯಾವ ಬೋಧನೂ ಆಗಲಿಲ್ಲ. ಮಳ್ಯಾಗ ತೊಯ್ದ ನಾಯಿ ಹಾಂಗ ಕೂಡೋ ಈ ಆಯುಬು ಯಾರು, ಅನ್ನೊದು ತಿಳಿಯಲಿಲ್ಲ. ಎರಡೂ ಮೊಣಕಾಲಮ್ಯಾಲೆ, ಕೈಮುದಡಿಸಿ ಸುಮ್ಮನ ಕೂತಿದ್ದ. ಅವನನ್ನ ಕಡೆ ನೋಡಿದ. ಚಿಮಣಿ ಬೆಳಕಿನ್ಯಾಗ ಅವನ ಸಣ್ಣ ಕಣ್ಣು ಮತ್ತು ನಗುಮುಖ ಕಂಡೆ.

"ಇದ ಊರಾವ ಏನು ?"

"ಅಲ್ಲ, ವಿಬತಪೂರದವ."

"ವಿಬತಪೂರ ! ಇಷ್ಟು ದೂರ ಯಾಕ ಬಂದಿ ?"

ಗಟ್ಟಿಯಾಗಿ ಹಾಕಿದ ಟೊಪಿಗಿ ತಗೆದು, ತಳಗಿಟ್ಟು ಎರಡೂ ಕಾಲು ಸಮಿಾಪ ತಗೊಂಡು ಕೋಣೆಯ ಸುತ್ತ ನೋಡಿ ಹೇಳಿದ,

"ನನಗ ಯಾರು ಇಲ್ಲ. ಹೊಟ್ಟೆ ಪಾಡಿಗಾಗಿ ಊರೂರ ಅಡ್ಯಾಡತೇನಿ. ಇವತ್ತ ಇಲ್ಲೆ ಬಂದೆ. ಊರಾವರು ಅಂದರು, 'ಮಾಸ್ತರ ಒಬ್ಬ ಅದಾನ. ಅವಗ ಜೋಡಾಗ ಲಿಕ್ಕೆ ಹೋಗು.' ಅಂತ ಬಂದೆ !"

ಅನೇಕ ವರ್ಷದ ಪರಿಚಯವಿದ್ದಂತೆ ಭಾವನೆ ನನ್ನಲ್ಲಿ ಮೂಡಿತು. ಕೆಂಪು ಮೂಗಿದ್ದ, ತುಂಬಿದ ಗಲ್ಲದ ಈ ಆಯುಬೂ ಹೀಂಗ್ಯಾಕ ಓಡ್ಯಾಡತಾನ, ಅವ ಹ್ಯಾಂಗ ಬದಕತಾನ, ಇದರ ವಿಚಾರ ನಾ ಮಾಡಲಿಲ್ಲ. ನೀ ಊರ ಬಿಟ್ಟ ಯಾಕ ಬಂದಿ, ಏನ ಮಾಡಾವ ಇದ್ದೀ, ಎಲ್ಲಿ ಇರಾವ ಇದ್ದೀ, ಮೈಮ್ಯಾಲಿನ ಅರಿವಿ ಬಿಟ್ಟರ ಉಳಿವ ಅರಿವಿ ನಿನಗ್ಯಾರ ಇಲ್ಲ—ಈ ಯಾವ ಪ್ರಶ್ನೇನೂ ಕೇಳುವ ಗರಜು ನನಗ ಎನಿಸಲಿಲ್ಲ. ಹರಕ

ಅಂಗಿ ಮತ್ತು ಮುಸಲ್ಮಾನಿ ಪಾಯಜಮಾ ಹಾಕಿದ ಆಯಬೂ ಮತ್ತು ನಾನು ಹೆಚ್ಚೇನು ಮಾತನಾಡಲಿಲ್ಲ.

ಮರುದಿನ ಮುಂಜಾನೆ ತಿನಬೇಕೆಂದು ಇಟ್ಟ ರೊಟ್ಟಿ ಹೊರಗೆ ತೆಗೆದು, ಅದರ ಮ್ಯಾಲೆ ಖಾರ ಎಣ್ಣೆ ಹಾಕಿ ಅವನ ಕೈಯಾಗ ಕೊಟ್ಟೆ.

ಕೂತ್ಹಾಂಗ ಕೂತು ಕೈಯಾರ ರೊಟ್ಟಿ ಹಿಡಿದು ತಿಂದ. ಮಚಾಮಚಾ ಅನ್ನೊ ಬಾಯಿ ಸುಮ್ಮನಾಯಿತು. ಚರಗಿತುಂಬಿ ಕೊಟ್ಟ ನೀರನ್ನು ಅಂಗೈಯಾಗ ಹಿಡಿಕು ಕುಡದ. ಖಾಲಿ ಚರಗಿ ಡಬ್ಬುಹಾಕಿ, ಅತಲಾಗ ಇತಲಾಗ ನೋಡಕೊತ ಕೂತ.

ನಾನೂ ತೊಲಿ ನೋಡಕೊತ ಹತ್ತು ಮಿನಿಟ ಹಾಸಿಗಿಗೆ ಆತಕೂತೆ.

ಆಯಬೂನ ಜಡ ಉಸಿರು ಕೇಳಿಸಹತ್ತಿತು. ಅವ ಕೂತಲ್ಲೆ ಮಲಗಿದ್ದ. ಇರಲಿಕ್ಕೆ ಜಗಾ, ಕುಡಿಲಿಕ್ಕೆ ನೀರು, ಹೊಟ್ಟಿಗೆ ಅಷ್ಟು ರೊಟ್ಟಿ ಸಿಕ್ಕಿತ್ತು. ನನ್ನ ಕೆಳಗಿದ್ದ ಗೊಂಗಡಿ ತೆಗೆದು ಅವನತ್ತ ಒಗದೆ. ಗೊಂಗಡಿ ಮೈಮ್ಯಾಲೆ ಬಿದ್ದಕೂಡಲೆ ಎಚ್ಚರಾದ, ಗೊಂಗಡಿ ಕಡೆ ನೋಡಿ, ನಾ ಚಾದರ ಹೊತಗೊಂಡು ಮಲಗಿದೆ. ಅವನೂ ಗೊಂಗಡಿ ತಗೊಂಡು, ಅರ್ಧ ಕೆಳಗ ಹಾಸಿ ಉಳಿದ ಅರ್ಧ ಹೊತಗೊಂಡು, ಹಾಲೂ ಅನ್ನ ಉಂಡ ಬೆಕ್ಕಿನ್ಹಾಂಗ ಮಲಗಿದ. ಹಾಂಗ ಗೊರಕಿ ಹೊಡೆಯಲಿಕ್ಕೂ ಹತ್ತಿದ.

ಬರ್ಚಿ ಹಿಡಕೊಂಡು ತಿರುಗಾಡೋ ದಾದೂಗ ಅಂಜೊ ಹಾಗಿಲ್ಲೆಂದು ನಾ ನಿಶ್ಚಯ ಮಾಡಿದೆ. ನಾನೇನು ಅಂಜುಬುರುಕನಲ್ಲ. ಚಿಕ್ಕವನಾಗಿದ್ದರೂ ಸಾಕಷ್ಟು ಅನುಭವ ಪಡೆದಿದ್ದೇನೆ. ಅಂಥ ಬದುಕು ನನ್ನದಾಗಿತ್ತು. ಆದರ ಈಗ ಬಂದ ಅನುಭವದ ರೀತಿಯೇ ಬೇರೆಯಾದ್ದರಿಂದ ನಾನು ಸ್ವಲ್ಪ ಬೆದರಿದ್ದೆ. ಈ ಬೆದರಿಕೆಗೆ ಆದ ನನ್ನ ಪ್ರತಿಕ್ರಿಯೆ ಬೇರೆಯೇ ಆಗಿತ್ತು. ನನ್ನಲ್ಲಿ ವಿಲಕ್ಷಣ ಧೈರ್ಯ ಬಂದಿತ್ತು. ಗಾಳಿ ಬರಲೆಂದು ಬಾಗಿಲು ಮುಚ್ಚದೆ, ಆಯಬೂನಷ್ಟೇ ನಿಶ್ಚಿಂತನಾಗಿ ಗಾಢಾಗಿ ಮಲಗಿದೆ.

ಬನಗರವಾಡಿಯಲ್ಲಿ ಹೆಚ್ಚಾಗಿ ಕುರುಬರ ಸಂಖ್ಯೆಯೇ ಇತ್ತು. ಕಪ್ಪುಬಣ್ಣದ ಈ ಕುರುಬರು ಬರಿಮೈಲೆ ಅಡ್ಡಾಡತಾ ಇದ್ದರು. ಹೊರಗಿನ ಜಗತ್ತಿನ ಪರಿಚಯವು ಅವರಿಗಿರಲಿಲ್ಲ. ನಸುಕಿನಲ್ಲಿ ದಡ್ಡ್ಯಾಗಿನ ಕುರಿ ಹೊರಗ ಬಿಟ್ಟು, ಅವನ್ನು ಹೊಡಕೊಂಡು, ಊರ ಬಿಟ್ಟು ದೂರ ಹೋಗುವರು. ನೂರು ಕುರಿಗೆ ಒಬ್ಬ ಕುರಿ ಕಾಯಾವ ಮತ್ತು ಒಂದು ನಾಯಿ, ಹೀಗಿತ್ತು ಅವರ ಲೆಖ್ಖ. ಆಡು ಕುರಿ ಕೆಳಗೆ ಮುಖಮಾಡಿ 'ಘರ್ರ ಘರ್ರ' ಅನ್ನುತ್ತ ಮುಂದ ಮುಂದ ನಡಿಯತಾ ಇರತಿದ್ದವು. ಹುಲ್ಲಿನ ಬೀಜ ಅವುಗಳ ಮೈಗೆ ಹತ್ತಿ, ಅವುಗಳೊಡನೆ ಅನೇಕ ಬೈಲುಗಳಲ್ಲಿ ಹೋಗಿ ಬೀಳುತ್ತಿತ್ತು. ಮತ್ತ ಅದರಿಂದ ಹುಲ್ಲಾಗಿ ಕುರಿಗಳಿಗೆ ಮೇಯಲಿಕ್ಕೆ ಸಿಗತಿತ್ತು. ಹೆಗಲ ಮ್ಯಾಲೆ ಕೋಲ ಅಡ್ಡ ಹಿಡಿದು, ಕುರಿಹಿಂಡಿನ ಹಿಂದಿಂದ ಈ ಕುರಿಕಾಯಾವರು ಅಡ್ಡಾಡತಿದ್ದರು. ದಿನವಿಡಿ ಬಿಸಿಲಿನ ಬೇಗೆಯಲ್ಲಿ ಇರತಿದ್ದರು. ನಾಯಿಯೂ ಅವನ ಜೋಡಿ ಇದ್ದು ಬೇಸರ ಗೊಳ್ಳುತಿತ್ತು. ಒಮ್ಮೊಮ್ಮೆ ನಾಯಿ ಜಿಟ್ಟ ಹಿಂದ, ಇಲ್ಲದರ ಓತಿಕಾಟದ ಹಿಂದ ಓಡತಿತ್ತು. ಒಮ್ಮೊಮ್ಮೆ ಕಾರಣ ಇಲ್ಲದನ ಬೊಗಳತಿತ್ತು—ಹೀಂಗ ಏನಾರ ಮಾಡಿ ಬ್ಯಾಸರ ಕಡಿಮೆ ಮಾಡಿಕೊಳ್ಳುತ್ತಿತ್ತು. ಇದ ಕಥಿ ಕಾಯುವರದು ಇರತಿತ್ತು. ಅವ ಅದರಾಗ ಚುರುಕನ ಕುರಿಮರಿ ಹಿಡಿದು ಅದರ ಕೊಳ್ಳಾಗ ಘಂಟಿ ಕಟತಿದ್ದ. ರೊಟ್ಟಿ ತಿನ್ನಾಕ ಕೂತಾಗ ಅದಕ್ಕೂ ರೊಟ್ಟಿ ತುಣುಕ ತಿನಸಾವ. ನಿಂತ ಬೆಳ್ಯಾಗಿನ ನಾಕೆಂಟು ತೆನಿ ಹರಕೊಂಡು ಆ ಮರಿಗೆ ತಿನಸಾವ. ಹೀಗಾಗಿ ಆ ಮರಿ ನಾಯಿ ಹಾಂಗ ಅವನ ಬೆನ್ನಹತ್ತತಿತ್ತು. ಅದಕ್ಕ ಕೋಲಿನ ಮೇಲೆ ಹಾರಲಿಕ್ಕೆ ಕಲಿಸತಿದ್ದ. ಅದು ಕೂಡು ಅಂದರ ಕೂಡತಿತ್ತು, ಏಳ ಅಂದರ ಏಳತಿತ್ತು. ಹೀಂಗ ಅದಕ್ಕ ಕಸರತ ಕಲಿಸತಿದ್ದ. ಉಳಿದ ಕುರಿ ಮೆಯತಾ ಇರತಿದ್ದವು.

ಹಾಂಗ ಕೈಯಾಗಿನ ಕೊಡ್ಲಿಲೆ ಜಾಲಿಕಟಗಿ ಕಡದು ಅದನ್ನ ಕೆತಕೊತ ಕೂಡಾವ. ಸಮಯ ಸಾಧಿಸಿ ಜಾಲಾಹಾಕಿ ಪಾರಿವಾಳನೂ ಹಿಡಿಯುವ.

ಕುರಿ ಮೇಯುತ್ತಿದ್ದಾಗ ಕಾಯಾವರು ಈರೀತಿ ವೇಳ್ಯಾ ಕಳೆಯುತ್ತಿದ್ದರು.

ಹೀಂಗ ಒಬ್ಬೊಬ್ಬನಾಗಿ ಕುರಿ ಕಾಯಾವರು ಕಡಿಮೆ. ಸಾಮಾನ್ಯವಾಗಿ ಇಬ್ಬರು ಮೂವರು ಕೂಡಿ ಕುರಿ ಕಾಯಲಿಕ್ಕೆ ಹೋಗತಾ ಇದ್ದರು. ಮಧ್ಯಾಹ್ನ ಆತ ಅಂದರ ಸಮೀಪದ ಭಾವ್ಯಾಗ ಸರತಿಯಂತೆ ಸ್ನಾನಮಾಡಿ ಕುರಿಹಿಂಡಿನ ಹತ್ತಿರ ಬರಾವರು. ಬಿಸಿಲಿನ ತಾಪ ಆತ ಅಂದರ ಕುರಿ ಹಿಂಡೂ ನೀರಿನತ್ತ ಓಡತಿದ್ದವು. ಒಣ ಹಳ್ಳದ ಮೂಲ್ಯಾಗ ಹಾವಸೆ ಕಟ್ಟಿದ ನೀರು ಕುಡಿಯುತ್ತಿದ್ದವು. ನೀರ ಕುಡಿದು ಹರಕಮುರಕ

ನೆರಳಲ್ಲಿ ಹೋಗಿ ನಿಲ್ಲುತ್ತಿದ್ದವು. ಆಗ ಕುರಿಕಾಯೂವರು ಗಿಡದ ನೆಳ್ಳಾಗ ಕೂತು ರೊಟ್ಟಿ ತಿನ್ನತಿದ್ದರು. ಊಟ ಆದ ಮ್ಯಾಲೆ ಒಬ್ಬವ ಎಚ್ಚರ ಇರತಿದ್ದ. ಉಳದವರು ಜಾಡಿಹಾಕಿ, ಮುಖದ ಮ್ಯಾಲೆ ಪಟನಾದ ಚುಂಗು ಮುಚಿಗೊಂಡು ಮಲಗಾವರು. ನಾಯಿ ಹಳ್ಳದಾಗಿನ ತಂಪ ಉಸಗಿನ್ಯಾಗ ಮೈತಿಕ್ಕೋತ ಬೀಳತಿದ್ದವು.

ಇನ್ನೂ ಬೆಳಕು ಇದ್ದಾಗನ ಊರಕಡಿಗೆ ಹಿಂಡನ್ನು ತಿರುಗಿಸತಿದ್ದರು. ಬೈಲಾಗಿನ ಎಲಿ. ಹುಲ್ಲು ಮೇಯಕೊತ ಕುರಿ ತಿರುಗಿ ಬರತಿದ್ದವು, ಊರ ಹತ್ತಿರ ಬಂದಾಗ ಸಂಜೆ ಆಗಿರತಿತ್ತು. ಊರ ಹತ್ತಿರ ಬಂದಕೂಡಲೆ, ಕಾಯೂವರು ಬಂದು ಬಾಜೂಕ್ಕ ನಿಂತು, ತಮ್ಮ ತಮ್ಮ ಹಿಂಡು ಬೇರೆ ಮಾಡಿ ಮನೆಕಡೆಗೆ ಹೋಗತಿದ್ದರು. ಒಂದು ದೊಡ್ಡ ಹಿಂಡಿನ್ಯಾಗ ನಾಲ್ಕಾರ ಹಿಂಡಾಗತಿದ್ದವು.

ಗಂಡಸರು ಕುರಿಕಾಯಲಿಕ್ಕೆ ಹೋದಮೇಲೆ, ಅವರ ಹೆಣ್ಣುಮಕ್ಕಳು ರಾಟಿ, ಟಕಳಿಗಳ ಮೇಲೆ ಉಣ್ಣೆ ನೂಲತಿದ್ದರು. ಕುರಿ ಬಂದ ಕೂಡಲೆ ಅವರು ಏಳತಿದ್ದರು. ದಡ್ಯಾಗಿಟ್ಟ ಕುರಿಮರಿ ಬಿಡತಿದ್ದರು. ಒಲ್ಯಾಗ ಬೆಂಕಿ ಮಾಡತಿದ್ದರು. ಇಷ್ಟರೊಳಗ ಕತ್ತಲಾಗತಿತ್ತು. ಎಲ್ಲಾರ ಮನ್ಯಾಗ ಕಡ್ಡಿಪೆಟಿಗೆ ಇರತಿದ್ದಿಲ್ಲ. ದೀಪ ಹಚ್ಚಿದವರ ಮನೆಗೆ ಹೋಗಿ ದೀಪ ಹಚಿಗೊಂಡು ಬರತಿದ್ದರು. ಒಲಿ ಹೊತ್ತಿಸಿ ರೊಟ್ಟಿ ಸುಟ್ಟ ಕೊಡತಿದ್ದರು.

ಅಡವ್ಯಾಗಿಂದ ಕುರಿ ತಿರುಗಿ ಬಂದ ಮೇಲೆ ಅವನ್ನ 'ಹೊಂದಸೂದು' ಕುರಿ ಕಾಯೂವಗ ಒಂದು ಕೆಲಸವ ಇರತಿತ್ತು. ಅದಕ್ಕ ಒಂದ ತಾಸ ಅರ್ಧ ತಾಸ ಹಿಡಿತಿತ್ತು. ದಡ್ಯಾಗಿನ ಮರಿ, ಅಡವ್ಯಾಗಿಂದ ಬಂದ ಕುರಿ ಕೂಡಿದವಂದರ ದೊಡ್ಡ ಗೊಂದಲನ ಏಳತಿತ್ತು.

ತಾಯಿ ತನ್ನ ಮರಿ ಹುಡುಕಿಕೊತ ಅಡ್ಯಾಡುವಾಕಿ, ಮರಿ ತನ್ನ ತಾಯನ್ನ ಹುಡುಕಿಕೊತ ಅಡ್ಯಾಡೊವು. 'ಬೆಂ ಬೆಂ ಮೆಂ ಮೆಂ'ದ ಗೊಂದಲವ ಗೊಂದಲ. ಯಾವದಾರ ಕುರಿ ಕೆಚ್ಚಲಕ್ಕ ಹೋಗಿ ಮರಿ ಬಾಯಿಹಚ್ಚತಿದ್ದವು. ಆ ಕುರಿ ತನ್ನ ಮರಿ ಅಲ್ಲ ಅಂತ ದೂರ ಸರಿಸತಿತ್ತು. ಈ ಗೊಂದಲದಾಗ ಮರಿ ಬೀಳತಿದ್ದವು. ತಮ್ಮ ತಮ್ಮ ಮರಿ ಹುಡುಕೊ ಕುರಿ, ಬಿದ್ದ ಮರಿ ತುಳಕೊತ ಓಡಾಡತಿದ್ದವು. ದಿನಾ ಕುರಿ ಅವುಗಳ ಮರಿ ಇವುಗಳ ಗೊಂದಲ ನಡದ ಇರತಿತ್ತು. ಸಾವಿರ, ಹನ್ನೆರಡು ನೂರ ಕುರಿ, ನೂರಿನ್ನೂರು ಮರಿ, ಕುರುಬರು, ಅವರ ಹೆಂಡಂದಿರ ದನಿ ಇವೆಲ್ಲ ಗೊಂದಲ ದಿನ ನಡೆಯುತಿತ್ತು. ಕುರಿ ಸದ್ದಿನಾಗ ಮನಷ್ಯಾರ ದನಿ ಕೂಡಿ ಹೋಗತಿತ್ತು, ಸಂಜೆಹೊತ್ತಿನ್ಯಾಗ ಕಾಗಿ ಗುಬ್ಬಿ ಚೀಟಾಟನೂ ನಡೆದಿರತಿತ್ತು. ಸುಂಯ್ಯಂದು ಗಾಳಿ ಬೀಸುತಿತ್ತು. ಕುರಿ ಹಿಕ್ಕೆ ಉಚ್ಚಿ ನಾತ ಬರತಿತ್ತು.

ಈ ಎಲ್ಲ ಗೊಂದಲದಾಗ ಕುರುಬರಿಗೆ ತಮ್ಮ ತಮ್ಮ ಕುರಿ ಹೊಂದಿಸಬೇಕಾಗ

ತಿತ್ತು. ಇದ ಗಂಗಿ ಮರಿ, ಇವೇನು ಕಂದಿ ಬಣ್ಣದ ಕುರಿ ಹೀಂಗದು ಸರಿಪಡಿಸು ತಿದ್ದರು. ತಪ್ಪಿಸಿಕೊಂಡು ಓಡಿಹೋಗುವ ಮರಿಗಳನ್ನು ಕಾಲ ಹಿಡಿದು ಎಳದು ತಂದು ತಾಯಿಹತ್ತಿರ ಇಡವರು. ಆಮೇಲೆ ಅವು ಕೆಚ್ಚಲಕ್ಕೆ ಬಾಯಿಹಾಕಿ ಹಾಲು ಕುಡಿಯು ತಿದ್ದವು. ಹೀಂಗ ಒಂದು ಅರ್ಧ ತಾಸ ನಡೆದ ಮ್ಯಾಲೆ ಶಾಂತವಾಗತಿತ್ತು. ಮರಿಗಳ ಮೈಮ್ಯಾಲಿನ ಧೂಳ ನೆಕ್ಕಿ ಕುರಿ ಅವನ್ನ ಸ್ವಚ್ಛ ಮಾಡತಿದ್ದವು. ಮರಿ ಮುಖಕ್ಕ ಹಾಲ ಹತ್ತಿರತಿತ್ತು.

ಗಿಡದಕಟ್ಟಿ ಹತ್ತರ ಬಂದಾಗ ಕುರಿಕಾಯೂವರು ಕೇಳುವರು:

"ಕುರಿ ಕೂಡಿದವೇನು?"

"ಹೂಂ, ನಿನ್ನವೂ ಕೂಡಿದವೇನು?"

"ಕೂಡಿದವಲ್ಲ."

ಅಷ್ಟರಾಗ ಹೆಣಮಕ್ಕಳು ರೊಟ್ಟಿ ಬಡದು ತಯಾರಿಡವರು. ಗಡಗ್ಯಾಗ ಹೆಸರು ಮಡಕಿ ಕುದಿತಿದ್ದವು. ಕುರಿ ಕೂಡಿಸಿ ಕುರುಬರು ಮನೆಗೆ ಹೋಗಿ ದಿನವಿಡೀ ಉದ್ದಾಗಿದ್ದ ಕೋಲನ್ನು ಅಡ್ಡಾಗಿಡತಿದ್ದರು. ಮುಖ ತೊಳಕೊಂಡು ಕೂತು, ಚಿಮಣಿ ಮುಂದ ಬೆಳಕಿನ್ಯಾಗ ರೊಟ್ಟಿ ಕಾಳು ತಿನಲಿಕ್ಕೆ ಸುರುಮಾಡಾವ. ಊಟ ಅನ್ನುವ ಮಾತಿನ ಅರಿವೇ ಅವರಿಗಿರಲಿಲ್ಲ. ರೊಟ್ಟಿ ತಿನ್ನೋದು! ಊಟ ಅಂದರ ನಾಲ್ಕಾರು ಪದಾರ್ಥ ಇರತಾವ, ಈ ಮಾತಿನ ಅರಿವು ಅವರಿಗಿರಲಿಲ್ಲ. ಅದರ ಗರಜೂ ಅವರಿಗೆ ಅನಿಸುತಿರಲಿಲ್ಲ. ಎರಡು ಹೊತ್ತು ರೊಟ್ಟಿ, ಅದರ ಸಂಗತಿಲೆ ಕಾಳು ಇಲ್ಲದರ ತೊಪ್ಪಲ ಪಲ್ಯಾ ಒಂದೆರಡು ನಿರುಳ್ಳಿ, ಸ್ವಲ್ಪ ಚಟ್ಣಿ ಇಲ್ಲದರ ಉಪ್ಪು! ಇಡೀ ದಿನ ದುಡಿದು ಕಷ್ಟ ಪಟ್ಟು, ತಿನ್ನೂದು ರೊಟ್ಟಿ!

ತಿಂದ ರೊಟ್ಟಿಯಲ್ಲ ಇಡೀ ದಿನ ಕುರಿ ಹಿಂಡಿನ ಹಿಂದ ಪಿರೀಪಿರೀ ಅಡ್ಯಾಡೊ ಕುರಿಕಾಯೂವನ ಕೈಕಾಲಾಗ ಇಳಿತಿತ್ತು. ಕಂಬಳಿ ತಗೊಂಡು ಹೊರಬೀಳತಿದ್ದ. ಒಂದು ಗಳಿಗಿ ಚಾವಡಿ ಮುಂದ ಕೂತು ಸುಖದುಃಖದ ನಾಲ್ಕು ಮಾತು ಆಡತಿದ್ದರು ಮತ್ತು ದಡ್ಡಿ ಇದುರಿಗೆ ಹೋಗಿ ಕಂಬಳಿ ಹಾಸಿ ಬೀಳತಿದ್ದ. ದಡ್ಯಾಗ ಕುರಿ, ಮನ್ಯಾಗ ಹುಡುಗರು ಹೆಣಮಕ್ಕಳು, ದಡ್ಡಿ ಹೊರಗ ಕುರಿಕಾಯೂವರು ಮಲಗಾವರು. ಕುರುಬ ತಲಿ ಹತ್ತರ ಕೊಡ್ಲಿ ಇಟಗೊಳತಿದ್ದ. ಉಳಿದವರೆಲ್ಲ ಸಂಪ ನಿದ್ದಿ ಮಾಡಿದರ ಕುರುಬ ಮತ್ತು ಅವನ ನಾಯಿ ನಿದ್ದಿ ಎಚ್ಚರವಾಗಿರುತಿತ್ತು.

ನಸುಕಿನಲ್ಲಿ ಕುರಿ ಹಿಕ್ಕಿ ಹಾಕತಿದ್ದವು, ಉಚ್ಚಿ ಹೊಯತಿದ್ದವು. ಕಾಯೂವನೂ ನಸುಕಿನ್ಯಾಗ ಎಚ್ಚರಾಗುತಿದ್ದ. ದಡ್ಯಾಗ ಕುರಿ 'ಬೆಂ ಬೆಂ' ಅಂತ ಗೊಂದಲವೆಬ್ಬಿಸ ತಿದ್ದವು. ದಡ್ಯಾಗಿಂದ ಕುರಿ ಹೊರಗೆ ತೆಗೆದ ಮೇಲೆ ಮರಿ ಕೆಚ್ಚಲಕ್ಕೆ ಬಾಯಿ ಹಚ್ಚಿ, ತಂಗಾಳಿಯಲ್ಲಿ ಶಾಂತವಾಗಿ ಹಾಲು ಕುಡಿಯುತಿದ್ದವು. ದಡ್ಯಾಗ ಹಿಕ್ಕಿ ಬಿದ್ದಿರತಿತ್ತು,

ಉಚ್ಚಿ ಹರಿತಿರತಿತ್ತು. ಕುರುಬ ಕಸಬರಗಿಲೆ ಕಸಾತೆಗೆದಂ ಹಿಕ್ಕಿ ಉಚ್ಚಿ ಕೂಡಿಸವ, ದಡ್ಡಿ ಸ್ವಚ್ಛ ಮಾಡಾವ. ಬೆಲೆಯುಳ್ಳ ಈ ಗೊಬ್ಬರವನ್ನು ತಿಪ್ಪಿಯಲ್ಲಿ ಹಾಕಾವ. ವರ್ಷ ಕೊನೆಗೆ ಒಕ್ಕಲಿಗರು ಬಂದು ಈ ಗೊಬ್ಬರ ಕೊಂಡು ಒಯ್ಯುವರು. ಆದಕ್ಕ ಒಳ್ಳೆ ಬೆಲೆ ಬರತದಂತ ಕುರುಬರು ಅದನ್ನು ಒಳೆ ಜಾಗ್ರತೆಯಿಂದ ಕೂಡಿಸತಾ ಇದ್ದರು. ಹಾಲುಂಡು, ಖುಷಿಯಾಗಿ ಸಣ್ಣ ಬಾಲ ಅಳಗಾಡಿಸಿಕೊತ ಮರಿ ಕುಣಿಯುತಿದ್ದವು; ಕಾಲಾಗ ಬಿದ್ದ ಉಣ್ಣ ತುಳಿಯುತಿದ್ದವು. ಮರಿಗಳನ್ನೆಲ್ಲ ಒಂದೆಡೆ ಕೂಡಿಸಿ ಮತ್ತ ದಡ್ಯಾಗ ಹಾಕತಿದ್ದರು. ಹೆಂಡತಿ ಮಾಡಿದ ಬಿಸಿಬಿಸಿ ರೊಟ್ಟಿ ಹಾಲಾಗ ನೆನಿಸಿ ತಿನ್ನತಿದ್ದ. ರೊಟ್ಟಿ ಚಟ್ಣಿ ಕಟಕೊಂಡು ಕುರಿ ಕೂಡಿಸಿ, ಒಂಡುಮಾಡಿ ಹೆಗಲ ಮ್ಯಾಲೆ ಜಾಡಿ ಒಗೆದು, ಕೈಯಾಗ ಕೋಲು ಹಿಡಿದು ಅಡವಿಗೆ ಹೋಗತಿದ್ದ. ಅಡವ್ಯಾಗ ಮೇಯಲು ಆತುರವಾದ ಕುರಿ 'ಬೆಂ ಬೆಂ' ಅಂದು ಮರಿಗಳಿಗೆ ಹೋಗಿಬರತೇವೆಂದು ಹೇಳುತಿದ್ದವು. ದಡ್ಯಾಗಿನ ಮರೀಸೂ 'ಮೆಂ ಮೆಂ' ಎಂದನ್ನುವವು. ಅಡವಿಗೆ ಹೋಗೊ ಕುರಿ, ಮರಿನ್ನ ತಿರುತಿರುಗಿ ನೋಡುತಿದ್ದವು.

ಬಿಸಿಲು ಏರೋದಕ್ಕಿಂತ ಮೊದಲು ಕುರಿ ದಡ್ಯಾಗಿಂದ ಹೊರಬಿದ್ದು ಅಡವಿಗೆ ಹೋಗತಿದ್ದವು. ಕುರಿ ಅಡವಿಗೆ ಹೋದವು ಅಂದರ ಊರಾಗ ಜೀವಾನ ಇಲ್ಲದ್ಹಾಂಗ ಆಗತಿತ್ತು. ಒಕ್ಕಲಿಗರೂ ತಮ್ಮ ತಮ್ಮ ದನ ಅಟಿಕೊಂಡು ಹೊಲಕ್ಕ ಹೋಗತಿದ್ದರು. ಚಿಕ್ಕಮಕ್ಕಳು ಕುರಿಹಿಂಡಿನ ಹಿಂದ ಹೋಗತಿದ್ದವು. ಹೆಣಮಕ್ಕಳೂ ಮಕ್ಕಳನ್ನು ಕಂಕುಳ ದಲ್ಲಿಟ್ಟು ತಲಿಮ್ಯಾಲೆ ಬುಟ್ಟಿ ಇಟಗೊಂಡು, ಬುತ್ತಿ ಕಟಿಗೊಂಡು ಹೊಲಕ್ಕ, ಅಡವಿಗೆ ಹೋಗತಿದ್ದರು. ಅವರ ಕೂಡ ನಾಯಿನೂ ಹೋಗತಿದ್ದವು. ಮಧ್ಯಾನ್ಹದಾಗ ಕಂಬಳಿ ನೇಯೋ ಹೆಣಮಕ್ಕಳನ್ನು ಬಿಟ್ಟರೆ, ಊರಾಗ ಯಾರೂ ಇರತಿದ್ದಿಲ್ಲ.

೬

ಹಾಂಗ ದಿನ ತಪ್ಪದ ಹತ್ತು ಹನ್ನೆರಡು ಹುಡುಗರು ಸಾಲಿಗೆ ಬರತಿದ್ದವು. ಕೆಲಸ ಮಾಡದಿರುವರು, ಕುರಿಹಿಂಡಿನಿಂದ ಹೋಗದಿರುವರು ಮಾತ್ರ ಬಂದು ಸಾಲ್ಯಾಗ ಕೂಡತಿದ್ದರು. ನಾ ಅವರಿಗೆ 'ರ ಠ ಈ ಕ' ಕಲಿಸಿತಿದ್ದೆ ಬರಿಲಿಕ್ಕೆ ಹೇಳತಿದ್ದೆ.

ಬೆಳಗಾದ ಮೇಲೆ ಕುರಿ ಅಡವಿಗೆ ಹೋದಮ್ಯಾಲೆ, ಅರ್ಧಬತ್ತಲೆ ಇದ್ದ ಹುಡುಗರು ಸಾಲಿಗೆ ಬರತಿದ್ದರು. ಮಾರಿ, ಕಣ್ಣು ತೊಳಕೊಳ್ಳದನ, ಮೈಯಾಗ ಅಂಗಿ ಹಾಕ್ಕೊಂಡು ತಲಿಗೆ ಅರಿವಿ ಸುತಕೊಂಡು ಇವರು ಸಾಲಿಗೆ ಬರತ್ತಿದ್ದರು. ಶಗಣಿಲೆ ಸಾರಿಸಿದ ನೆಲದ ಮ್ಯಾಲೆ ಕೂತು ಬಡತಾಡಾವರು. ಆ ಮೇಲೆ ಸುಮ್ಮನ್ನ ಕೂಡಾವರು. ಪಾಟಿ ಮ್ಯಾಲೆ ಬರಿಯಾವರು. ಪಾಟಿ ಉಗುಳಿಲೆ ಒರಸಾವರು. ಯಾವನಾರ ಒಬ್ಬವ ಎದ್ದು ಕಿರಬಳ್ಳ ತೋರಿಸಿ ಒಂದಕ್ಕ ಹೋಗವ. ಗೊಡಿಕಲ್ಲಿನ ಮ್ಯಾಲೆ ಪೆನ್ಸಿಲ ತಿಕ್ಕಿ ಚೂಪ ಮಾಡ ತಿದ್ದರು. ಗೊ ಕಲ್ಲು ವಿಭೂತಿ ಹಚ್ಚಿದ್ಹಾಂಗ ಕಾಣತಿದ್ದವು. ಪೆನ್ಸಿಲ ಲಗು ತೀರತಾವ ಅಂತ ತಾಯಿತಂದಿ ತಕ್ರಾರ ಮಾಡತಿದ್ದರು. ಸಾಲಿಗೆ ಬರೊ ಮುಂಚ ಮಾರಿ ಕಣ್ಣು ತೊಳಕೊಂಡು ಬರಬೇಕು, ಪಾಟಿ ಒರಿಸಲಿಕ್ಕೆ ಒದ್ದಿ ಅರವಿ ತಗೊಂಡು ಬರಬೇಕು, ಎಂದು ಅನೇಕ ಸಲ ಹೇಳಿದರೂ ಕೇಳುತಿರಲಿಲ್ಲ. ಮಾರಿ ತೊಳಕೊಂಡು ಬಾ ಎಂದು ಹುಡುಗರಿಗೆ ಮನಿಗೆ ಕಳಿಸಿದರೆ ಅವರು ತಿರುಗಿ ಬರತಿದ್ದಿಲ್ಲ. ಕೆಲವರು ತಂದ ಒದ್ದಿ ಅರವಿ ಒಣಗತಿದ್ದವು, ಮತ್ತು ಅವರು ಉಗುಳಿನಿಂದ ಪಾಟಿ ಒರಿಸತಿದ್ದರು. ಸಾಲಿ ತುಂಬ ನೊರಜುಗಳಿದ್ದದ್ದರಿಂದ ಯಾರವಾರ ಕಣ್ಣು ಬಂದ ಬರತಿದ್ದವು. ಒಬ್ಬವನು ಕಣ್ಣು ಬಂದವ ಅಂದರೆ ಆ ಬೇನೆ ಮಂತ್ತೊಬ್ಬರಿಗೆ ಹತ್ತತಿತ್ತು, ಕಣ್ಣಬ್ಯಾನಿ ಬಂದಾಗ ಹುಡುಗರು ಅಳಾವರು. ಅವರವರ ತಾಯಂದಿರು ಕಣ್ಣಿನಮ್ಯಾಲೆ ಹಾಲಿನ ಪಟ್ಟಿ ಇಡತಿದ್ದರು ಮತ್ತು ಮಾವಲ್ಯಾದೇವತೆಗೆ ಬೇಡಿಕೊತಿದ್ದರು.

ಬೆಳಿಗ್ಗೆ ಸುರುವಾದ ಸಾಲಿ ಹತ್ತುವಾ ಘಂಟೆಗೆ ಬಿಡತಿತ್ತು. ಒದರ್‍ಯಾಡಕೋತ, ಚೀರಕೋತ ಹುಡುಗರು ಮನಿಗೆ ಹೋಗತಿದ್ದರು. ಮಧ್ಯಾನ್ಹ ಮೂರಕ್ಕ ಸುರುವಾದ ಸಾಲಿ ಸಂಜಿ ಆರಕ್ಕ ಬಿಡತಿತ್ತು. ಹುಡುಗರು ಬೇಸರಿಯುತ್ತಿದ್ದವು. ಆದರೂ ಆಟಕ್ಕಂತ ಸಂಜಿಗೆ ಸಾಲಿ ಇಮರಿನ ಬೈಲಿನಲ್ಲಿ ಕೂಡತಿದ್ದರು.

ಬೆಳದಿಂಗಳ ಇದ್ದರ ಹಾಂಗ ರಾತ್ರಿನೂ ಆಡತಿದ್ದರು. ಅಡವ್ಯಾಗಿಂದ ತಿರುಗಿ ಬಂದ ತರುಣರು ಆಟದಾಗ ಹುಡುಗರ ಕೂಡ ಭಾಗವಹಿಸತಿದ್ದರು. ಒಮ್ಮೊಮ್ಮೆ ಆಟ ಆಡಲಿಕ್ಕೆ ನನಗೂ ಕರಿಯುತ್ತಿದ್ದರು. ಬೆಳ್ಳಿಯ್ಹಾಂಗ ಅಂದವಾದ ಬೆಳದಿಂಗಳದಾಗ ಆಟ ಒಳೆ ರಂಗಿನ್ಯಾಗ ಬರತಿತ್ತು. ಹನಮಂನಗುಡಿ ಕಟ್ಟಿ ಮ್ಯಾಲೆ ಕೂತು ಹಿರಿಯರು ಆಟ

ನೋಡಕೊತ ಕೂಡತಿದ್ದರು. ಕೆಲವು ಹುರುಪಿನ ಜನರು ಆಟ ಆಡವರ ಸುತ್ತ ಒಮ್ಮೊಮ್ಮೆ ಲೇಝಿಮ ನುಡಿಸತಿದ್ದರು. ಹಲಗಿ ಬಡಿದು ಲೇಝೀಮ ಆಟ ತಾಸ ತಾಸಗಟ್ಲೇನೂ ನಡಿಯುತ್ತಿತ್ತು. ಅಲ್ಲೆ ಬೈಲಿನಾಗ ಒಂದೆರಡು ಕಬ್ಬಿಣ ಗುಂಡು ಮತ್ತು ನಾಲ್ಕಾರು ಭಾರವಾದ ಕಲ್ಲುಗಳಿದ್ದವು. ವಯಸ್ಸಿನ್ಯಾಗ ಬಂದ ಹುಡುಗರು ಅವನ್ನ ಎತ್ತಿ ತಮ್ಮ ಶಕ್ತಿಪರೀಕ್ಷಾ ಮಾಡತಿದ್ದರು. ಒಂದೇ ಕೈಯಿಂದ ಕಬ್ಬಿಣ ಗುಂಡು ಒಂದು ಆಳು ಎತ್ತುವ ಸ್ಪರ್ಧೆಯು ನಡೆಯುತ್ತಿತ್ತು. ಕೈಗೆ ಪಟರಾ ಕಟಗೊಂಡು ಎತ್ತಿದ ಕಬ್ಬಿಣ ಗುಂಡನ್ನು ದೂರ ಒಗದರ ಭೂಮಿ ನಡಗತಿತ್ತು. ಕಲ್ಲನ್ನು ಎದಿಮಟ ಎತ್ತುತಿದ್ದರು. ಎತ್ತಿ ಕೆಳಗೆ ಒಗೆಯುತ್ತಿದ್ದರು.

ಬೀರಾ ಕುರುಬನ ಮನಿ ಊರಿಂದ ಎರಡು ಫರ್ಲಾಂಗ ದೂರ ಇತ್ತು. ಅವನ ಮಗ ಸತಾ ಇತ್ತಿಚಿಗೆ ಸಾಲಿಗೆ ಬರತ್ತಿದ್ದ. ಹಿಂದಿನ ಮಾಸ್ತರ ಕೈಯೊಳಗ ಕಲಿತು, ಪ್ರಗತಿಹೊಂದಿದ ನಾಲ್ಕಾರ ಪೈಕಿ, ಅವನೂ ಒಬ್ಬವ ಇದ್ದ. ವಯಸ್ಸು ಹನ್ನೆರಡಿದ್ದರೂ ಅವನ ಮೈಕಟ್ಟು ನೋಡೊಹಾಂಗ ಇತ್ತು. ಉಳಿದ ಹುಡುಗರಕಿಂತ ಅವನಲ್ಲಿ ತಿಳುವಳಿಕೆ ಹೆಚ್ಚು ಇತ್ತು. ಕಲಿಯುವ ಹವ್ಯಾಸವಿತ್ತು. ಸಾಲಿ ಬಿಟ್ಟ ಮ್ಯಾಲೆ ಬೇವಿನಗಿಡದ ಕಟ್ಟಿ ಮ್ಯಾಲೆ ಕೂತು ಅಭ್ಯಾಸ ಮಾಡತಿದ್ದ. ತಿಳಿಯದಿದ್ದರ ಗಣೀತ ಬಂದ ಕೇಳವ. ಅವನಲ್ಲಿರುವ ಅಭ್ಯಾಸ ವೃತ್ತಿ ಮತ್ತು ಕಲಿಯುವ ಹವ್ಯಾಸ ಕಂಡು ನಾನಂದೆ,

"ಎಷ್ಟು ಕಲಿಬೇಕಂತೀದಿ ?"

"ಯೋಳನೆಯತ್ತ ಮುಗಿಸಬೇಕಂತ ಅಂತೇನಿ !" ಸತಾ ಅಂದ

"ತಾಲೂಕಿನ ಸಾಲಿಗೆ ಹೋಗಬೇಕಾದೀತು"

"ಹೋಗತೇನಿ"

"ನಿಮ್ಮಪ್ಪ ನೀ ಕಲಿಬೇಕು ಅಂತಾನೇನು ?"

"ಅವಗ್ಯಾರ ಕೇಳತಾರ ?"

ಮಕ್ಕಳು ಕಲಿತರ ಒಕ್ಕಲತನ ಮಾಡುದಿಲ್ಲ, ಬರೇ ಬಿಳೇ ಅರಿಬಿ ಹಾಕೋ ಚಟಾ ಕಲಿತಾರ ಎಂಬ ಅಭಿಪ್ರಾಯ ಬೀರಾನದು. ಅವ ತನ್ನ ಮಗನಿಗೆ ಕಲಿಯಲಿಕ್ಕೆ ಕೊಡತಾನೋ ಇಲ್ಲ ಎಂಬ ಸಂದೇಹ ನನಗೆ. ಆದರೂ ನಾ ಹೆಚ್ಚಿ ಆಸ್ಥೆಯಿಂದ ಸತಾನಿಗೆ ಕಲಿಸತಿದ್ದೆ. ನನಗೆ ಅವ ಬೇಕಾದ ಹುಡುಗ ಆಗಿದ್ದ.

ಈ ಹನ್ನೆರಡ ಹುಡುಗರನ್ನ ಬಿಟ್ಟರ ಇನ್ನ ಮೂವರು ಬಂದು ಸಾಲ್ಯಾಗ ಕೂಡತಿದ್ದರು, ಆಯುಬೂ, ಮುಲಾಣಿ, ಆನಂದಾ ರಾಮೋಶಿ ಮತ್ತು ರಾಮಾ ಬನಗರ. ಬಹಳ ಹೊತ್ತು ಗೋಡೆಗೆ ಆತುಕೂಡತಿದ್ದರು. ಮಾತಾಡದ ಸುಮ್ಮನ ಕೂಡವರು. ಹುಡುಗರ ಮಾರಿ ಇಲ್ಲದಿದ್ದರ ನನ್ನ ಮಾರಿ ನೋಡಕೋತ ಕೂಡಾವರು. ನನಗೇನು ಅವರಿಂದ ತೊಂದರೆ ಇದ್ದಿಲ್ಲ. ಆದರ ಹೀಂಗ್ಯಾಕ ಬಂದು ಸುಮ್ಮನ ಮಿಕಿಮಿಕಿ ಮಾರಿ

ನೋಡಕೋತ ಕೂಡತಾರ ಎಂಬ ಕುತೂಹಲವಿತ್ತು. ಆದರ ವ್ಯಾಳ್ಯ ಕಳಿಯೊದ ಅವರ ಉದ್ದೇಶವಿತ್ತೆಂದು ಹಿಂದುಗಡೆ ತಿಳಿಯಿತು.

ಹೊಲಸ ಮೈ, ಖಮಟ ಅರಿವಿ ಹಾಕಿದ ಆಯುಬೂ ಖಾಲಿ ಇದ್ದ. ಏನೂ ಕೆಲಸ ಮಾಡತಿದ್ದಿಲ್ಲ. ಉದ್ಯೋಗಿ ಮಾಡೋದು ಹೊಟ್ಟೆಯ ಪಾಡಿಗಾಗಿ. ಆದರ ಅಂಥ ಪ್ರಶ್ನೆ ಅವಗ ಇದ್ದೇ ಇಲ್ಲ. ಅವ ಜಾತಿಯಿಂದ ಮುಲಾಣಿ (ಕಟಗಾರ) ಇದ್ದಾನೆಂದು ತಿಳಿದೊಡನೆ, ವಾಡಿ ಜನರು ಆನಂದದಿಂದ ಅವಗ ಊರಾಗ ಇಟಗೊಂಡರು. ಪ್ರಸಂಗ ಬಂದಾಗ ಅವರು ಎರಡನೆ ಊರಿಂದ ಮುಲಾಣಿನ್ನ ಕರಿಸಕೊಳ್ಳಬೇಕಾಗತಿತ್ತು. ಅದರಿಂದ ಕಾಲಹಣವಾಗತಿತ್ತು. ಈಗ ಅನಾಯಾಸವಾಗಿ ಆಯುಬೂ ಬಂದಿದ್ದ. ಅವರಿಗೆಲ್ಲ ಅನುಕೂಲವಾಯಿತು, ಮಧ್ಯಾನ್ಹ ಆತು ಅಂದರ ಅವ ನಾಲ್ಕ ಮನಿಗೆ ಹೋಗಿ ಬಿಸಿ ಬಿಸಿ ರೊಟ್ಟಿ ಚಟ್ಣಿ ತಗೊಂಡು ಬರತಿದ್ದ. ಎಲ್ಯಾರ ಕೂತು ರೊಟ್ಟಿ ತಿಂದು, ನೀರು ಕುಡಿದು ತೇಗಿ ಒರತಿದ್ದ, ಈ ರೀತಿ ಅವನ ಜೀವನ ನಡೆದಿತ್ತು. ಆಯುಬೂನ ಗರಜೂ ಕಡಿಮೆ ಮತ್ತು ಊರಾಗ ರೊಟ್ಟಿಗೂ ಕೊರತೆ ಇರಲಿಲ್ಲ. ಮಲಗಾಕ ಚಾವಡಿ ಇತ್ತು, ಬೈಲಿತ್ತು ಮತ್ತು ನನ್ನ ಕೋಣೆಯೂ ಇತ್ತು. ಹಾಸಿಗೆ ಹೊತ್ತಕೊಳ್ಳುವದರ ಗರಜೂ ಅವಗ ಇದ್ದಿಲ್ಲ. ಬೀಡಾಡಿ ನಾಯಿ, ಅಡವಿ ದನ ಮಲಕೊಂಡ್ಹಾಂಗ ಇವನೂ ಬೇಕಾದಲ್ಲೆ ಮಲಕೊತಿದ್ದ ಮತ್ತು ನಿದ್ದೀನೂ ಹತ್ತತಿತ್ತು. ಚಳಿ ಮಳೆಗೆ ಅವನ ಮೈಗ ರೂಢಾ ಆಗಿತ್ತು.

ನಾಲ್ವತ್ತರ ಅಂಚಿಗೆ ಬಂದ ಆನಂದ ರಾಮೋಶಿನೂ ಖಾಲಿ ಇದ್ದ. ಗಿಡ್ಡಾಗಿ ಬಡಕಾಡಿ ಮೈಕಟ್ಟಿನಾವ ಇದ್ದ. ಗಡ್ಡ ಯಾವಾಗಲೂ ಬೆಳೆದದ್ದವ ಇರತಿದ್ದವು. ತುಂಬಾ ಬೆಳೆದ ಕೂದಲ ಮ್ಯಾಲೆ ಒಂದು ಗಾಂಧಿ ಟೊಪಿಗೆ ಇರತಿತ್ತು. ಮೈಯಾಗ ಕೋಟು, ಒಂದು ಲಂಡ ಚಣ್ಣ ಈ ವೇಷದಾಗ ಅವ ಅಡ್ಯಾಡತಿದ್ದ. ಊರಾಗ ರಾಮೋಶಿ ಜನಾರವು ನಾಲ್ಕಾರು ಗುಡಿಸಲ ಇದ್ದವು. ಅವರಾಗ ಇವ ಒಬ್ಬವ. ರಾಮೋಶಿ ಜನರು ಯಾವ ಉದ್ಯೋಗನೂ ಮಾಡತಿದ್ದಿಲ್ಲ, ಆದರೂ ಅವರ ಹೊಟ್ಟಿ ತುಂಬತಿತ್ತು.

ಹೊಟ್ಟಿ ಅಡಚಣಿ ಬಂತಂದರ ಆನಂದ ಹೆಗಲಮ್ಯಾಲೆ ಕಂಬಳಿ ಹಾಕ್ಕೊಂಡು ಮಧ್ಯಾನದಾಗ ಊರಬಿಟ್ಟು ಹೋಗವ. ವಾಡಿ ಸುತ್ತಲೂ ನಾಲ್ಕಾರು ಮೈಲು, ಎರಡನೆ ಊರವರ ಭೂಮಿ ಇದ್ದವು. ಆ ಭೂಮ್ಯಾಗಿನ ಒಡ್ಡಿನ ಮ್ಯಾಲೆ ಅಡ್ಯಾಡಾವ.

"ಯಾಕೋ ಆನಂದ ?" ಅಂತ ಯಾರಾರ ಕೇಳಿದರ, "ರಾಮಾ ಲಿಗಾಡ್ಯಾನ ಹೊಲಕ್ಕ ಹೊರಟೇನಿ" ಅಂತಾ ಹೇಳಾವ. ರಾಮಾ ಲಿಗಾಡ್ಯಾ, "ಯಾಕಲೆ ಏನ್ಮತಿ ಇಚಾರ ?" ಅಂತ ಬೆದರಿಸಿದರ ಇವ ಶರಣಹೊಡೆದು "ತುಕಾ ಕರಂಡ್ಯಾನ ಹೊಲಕ್ಕ ಹೊರಟೇನಿ" ಅಂತ ಹೇಳವ.

"ಏನೋ, ಆನಂದ ಏನ್ನೈತಿ ತಯಾರಿ ?" ಅಂತ ತುಂಕಾ ಕೇಳಿದರ ಹಾಂಗ ಕೈಮಾಡಿ, "ಹಾಂಗ ಏನಿಲ್ಲ ಭೊಸಲೆ ಹೊಲಕ್ಕ ಹೋಗಿ ಬರತೇನಿ" ಅಂತ ಹೇಳಾವ.

ಹೀಗ ಅಡ್ಯಾಡಿ ಉಳ್ಳಾಗಡ್ಡಿ ಎಲ್ಲಿ ಅವ, ಬದ್ನಿಕಾಯಿ ಯಾರ ಹೊಲದಾಗ ಅವ, ಜೋಳದ ತೆನಿ, ಸಜ್ಜಿ ತೆನಿ ಎಲ್ಲೆಲ್ಲಿ ಅವ ಇದನ್ನೆಲ್ಲ ನೋಡಿ ಬರಾವ. ಕತ್ತಲಾದ ನಂತರ ಹೊಲದ ಮಾಲಿಕರು ಮನಿಗೆ ಹೋದಮೇಲೆ ಯಾರದಾರ ಹೊಲದಾಗಿನ ತೆನಿ, ಬದ್ನಿಕಾಯಿ ಉಳ್ಳಾಗಡ್ಡಿ ಮೆಣಸಿನಕಾಯಿ ತ್ರಗಾದು ಕಂಬಳ್ಯಾಗ ಹಾಕ್ಕೊಂಡು ಮಧ್ಯ ರಾತ್ರಿಗೆ ತಿರಗಿ ಊರಿಗೆ ಬರತಿದ್ದ. ಬೆಳತನಕ ತೆನಿ ಬಡದು ಕಾಳ ತಯಾರ ಮಾಡತಿದ್ದ. ಹೆಂಡತಿ ಬೀಸತಿದ್ದಳು. ಬದ್ನಿ ಕುದಿಸತಿದ್ದಳು. ಅಡಗಿ ಮಾಡಿ ಊಟಕ್ಕ ಹಾಕತಿದ್ದಳು. ದೊಡ್ಡ ದೊಡ್ಡ ಹೊಲದಾಗ ಇಷ್ಟು ಕಳವಾದರ ಗೊತ್ತನೂ ಆಗತಿದ್ದಿಲ್ಲ, ಹಕ್ಕಿ ತಿಂದವೋ ದನ ತಿಂದವೋ, ಅದೂ ಗೊತ್ತಾಗತಿದ್ದಲ್ಲ. ಆನಂದನ ಮ್ಯಾಲೆ ಯಾರೂ ಸಂಶಯು ತಗೊತಿದ್ದಿಲ್ಲ! ಈ ಅವನ ಉದ್ಯೋಗ ಅನೇಕ ವರ್ಷ ನಡದೇ ಇತ್ತು. ಚಿಕ್ಕಪುಟ್ಟ ಕಳವು ಮಾಡೋದ ಅವನ ಉದ್ಯೋಗ. ಮತ್ತ ಅದನ್ನ ಮಾಡೋ ಕಲಾನೂ ಅವನಲ್ಲಿತ್ತು. ಈ ಕಸಬಿನ ಮೂಲಕ ಅವನ ಉದ್ಯೋಗ ತೇಜಿಯಲ್ಲಿತ್ತು. ತಾ ಮಾಡಿದ ಕಳವನ್ನು ಎಷ್ಪೋಸಲ ಅವ ಹತ್ತು ಹದಿನೈದು ದಿವಸದ ಮ್ಯಾಲೆ ಹೊಲದ ಮಾಲಿಕರ ಕಡೆಗೆ ಹೋಗಿ ಒಪ್ಪಿಕೊಳ್ಳತಿದ್ದ. ತಾನ ಹೋಗಿ ಕೇಳವ,

"ಗೌಡರ, ನೀವಿಲ್ಲದಾಗ ತೋಟದಾಗಿನ ಬದ್ನಿಕಾಯಿ ಏನಾರ ಹೋಗ್ಯಾವೇನು?"

"ಹೌದೊ ಆನಂದ, ಯಾವ ಕಳ್ಳನೋ ಏನೋ. ಈಗಾಗಲೇ ಒಂದು ಬುಟ್ಟಿ ಕಾಯಿ ಹೋಗ್ಯಾವ ನೋಡು!"

"ಹೀಂಗೇನಾ! ನಾನ ಒಯ್ದಿದ್ದೆ"

"ಬೇಬರ್ಶಿ! ಕಳವ ಮಾಡಿ ಮ್ಯಾಲೆ ನಾಚಿಗೇಡಿ ಹಾಂಗ ಬಂದ ಹೇಳತಿ?"

"ಒಪ್ಪಿದರ ಪಾಪ ಹೋಗತೈತಿ ಅಂತಾರ, ಗೌಡರ. , ನಾಲ್ಕಾಯಿ ಕೊಡ ಅಂದರ ಯಾರಾರ ಕೊಡತಾರೇನು? ಇಲ್ಲ. ಹಾಂಗಾರ ನಾವೇನು ಮಾಡಬೇಕು? ಹಕ್ಕಿ ದನ ಇರವಿ ನಿಮ್ಮ ಕಾಳು ತಿಂದ ಹೋಗತಾವ, ಅವೇನು ನಿಮಗ ಕೇಳತಾವೇನು? ಅವಕ್ಕ ನೀವೇನು ಮಾಡತೀರಿ? ಹಾಂಗ ನಾನು, ನನಗೂ ಏನು ಮಾಡಬ್ಯಾಡರಿ, ಹಕ್ಕಿ ದನ ತಿಂದುಹೋದವು ಅಂತ ತಿಳಕೊಳ್ಳಿರಿ."

ಆನಂದನ ಇಂಥ ಸ್ವಭಾವದ ಪರಿಚಯು ಎಲ್ಲರಿಗೂ ಆಗಿತ್ತು. ಸವಡ ಸಿಕ್ಕಾಗ ಇವ ತನ್ನ ಸಂಗತಿಗೆ ಗೆಳೆಯರನ್ನ ಕರಕೊಂಡ ಅಡವಿಗೆ ಹೋಗಿ ಮೊಲ ಇಲ್ಲದರ ಉಡ ಹೊಡಕೊಂಡು ತಿಂದು ಬರವ. ಬಾಯಿಗೆ ರುಚಿ ಬರವ್ಹಾಂಗ ಆದಾಗ ಎರಡನೆ ಊರವರ ಒಂದೆರಡು ಕುರಿ ಕಳವು ಮಾಡಿ, ಕಡದು ಅಡವ್ಯಾಗ ಮಾಂಸ ಕುದಿಸಿ ತಿಂದ ಬರವ.

ಆನಂದನ ಕುಲದವರ ಬದಕುವ ರೀತಿ ಇದೇ ಆಗಿತ್ತು. ಎಲ್ಲ್ಯಾರ ಕೂಲಿ ಸಿಕ್ಕರ ಹೋಗವರು, ಇಲ್ಲದಿದ್ದರ ಕಳವು ಮಾಡೇ ಹೊಟ್ಟಿ ತುಂಬಿಕೊಳ್ಳ್ಯಾವರು.

ಬನಗರ ರಾಮಾ ಮಕ್ಕಳು ಮರಿಯಾವ ಇದ್ದು ಸಂಸಾರ ಮಾಡಿಕೊಂಡು ಬಾಳತಿದ್ದ. ಅವ ಮೂವತ್ತೈದು ದಾಟಿರಲಿಲ್ಲ. ದೊಡ್ಡ ಮುಖ ಮೀಸೀನು ದಪ್ಪಾದಾದ್ದವು. ರಾಕ್ಷಸನ್ಹಾಂಗ ಕಾಣತಿದ್ದ. ಅವನವು ಒಂದು ನೂರ ಕುರಿ ಇದ್ದವು. ಅವನ್ನ ನೋಡೊ ಕೆಲಸ ಅವನ ಅಪ್ಪನದಾಗಿತ್ತು. ಇವನ ಮಗನೂ ನೋಡತಿದ್ದ. ರಾಮಗ ಯಾವ ಉದ್ಯೋಗ ಇದ್ದಿಲ್ಲ. ಇದ್ದಿಲ್ಲ ಅನ್ನೊದಕ್ಕಿಂತ ಅವ ಯಾವ ಉದ್ಯೋಗ ಮಾಡತಿದ್ದಿಲ್ಲ, ಅನ್ನೊದ ಯೋಗ್ಯ ಮಾತಾದೀತು. ಅವನೂ ಸಾಲಿಗೆ ಒಂದು ಸುಮ್ಮನ ಕೂಡಾವ,

ಹೀಗೆ ಅವನೂ ಅನೇಕ ದಿನ ಬಂದು ಕೂಡತಿದ್ದ. ಸಾಲಿ ಬಿಟ್ಟಿತಂದರ ಕಂಬಳಿ ಹೆಗಲಮ್ಯಾಲೆ ಇಟಕೊಂಡ ಹೋಗತಿದ್ದ. ಮೊದಲ ಮೊದಲ ನಾನು ನಿಷ್ಠುರವಾಗಿ ಕೇಳತಿದ್ದೆ,

"ಯಾಕ ಬಂದಿದಿ ? ಏನು ಕೆಲಸ ಅದ ?"

"ಏನಿಲ್ಲ, ಹಾಂಗ ಬಂದೇನಿ" ಎಂದು ಗೊಗ್ಗರದವನ್ಹಾಗ ಹೇಳತಿದ್ದ.

ಹೀಂಗ ಬಹಳ ದಿವಸ ಸಾಲ್ಯಾಗ ಕೂತು ಕೂತು ಒಂದು ದಿವಸ ಅಂದ,

"ಮಾಸ್ತರ, ನಿನ್ನ ಕಡೆ ಒಂದು ಕೆಲಸ ಐತಿ"

ಸಾಲಿ ಬಿಟ್ಟಿತು. ಆನಂದ, ಆಯುಬೂ ಹೋದರು. ನಾನು ರಾಮಾ ಇಬ್ಬರ ಸಾಲ್ಯಾಗ ಉಳಿದೆವಿ. ಎಂದೂ ಮಾತಾಡದ ರಾಮು, ಇಂದು ಬಾಯಿ ತೆರದಿದ್ದ ನೋಡಿ ನನಗೂ ಆಶ್ಚರ್ಯವಾಯಿತು. ನನ್ನ ಕಡೆ ಇವನ ಕೆಲಸ ಏನಿರಬೇಕು ? ಅದ ಹೊಳೆಯುವಲ್ಲದು.

"ಏನು ಕೆಲಸ ಅದ ಹೇಳಲ್ಲ ?" ನಾ ಅಂದೆ,

ರಾಮಾ ಲಗು ಹೇಳುವಲ್ಲ. ಮಾರಿ ಕೆಳಗ ಮಾಡಿ ಸ್ವಲ್ಪ ಹೊತ್ತು ಕೂತ.

ಮಾತಾಡಬೇಕೊ, ಬ್ಯಾಡೊ ಎಂಬ ವಿಚಾರದಾಗ ಇದ್ದ.

ಅವಗ ಸಂಕೋಚವೆನಿಸಬಾರದೆಂದು ನಾನ ಅಂದೆ,

"ರಾಮುಭಾವು, ಏನು ಸಮಾಚಾರ ?"

ಅತಲಾಗ ಇತಲಾಗ ನೋಡಿ ರಾಮು ಅಂದ.

"ಮುಂಡಿ ಇದ್ದ ರಾಣೀ ಛಾಪಿನ ರೂಪಾಯಿ ನನ್ನ ಹತ್ತರ ಅದ......

ಈ ರೂಪಾಯಿ ಸರಕಾರದವರು ಬಂದುಮಾಡಿದ್ದರು.

"ಹಾಂಗಾರ ಮುಂದೇನು ?"

"ಅದು ಬಂದ ಆಗ್ಯದಂತ ! ಬಡವಗ ನುಕ್ಸಾನ ಆಗತಾದ."

"ಹೌದು, ಬಂದ ಆಗ್ಯದ. ಪ್ಯಾಟ್ಯಾಗ ಯಾರೂ ತಗೊಳುದಿಲ್ಲ.

"ನೀನು ತಾಲೂಕಿಗೆ ಹೋಗಿ ಬರೋದು ಮಾಡತೀದಿ. ನಿನ್ನ ವಜನ ಖರ್ಚು ಮಾಡಿ ನಡದರ ನಡಿಸು. ನನ್ನ ಮ್ಯಾಲೆ ಉಪಕಾರ ಮಾಡಿದ್ಹಾಂಗ ಆಗತಾದ."

ನಡಿತದ ಇಲ್ಲೊ ನನಗೂ ಗೊತ್ತಿದ್ದಿಲ್ಲ. ನನ್ನ ಮ್ಯಾಲೆ ಇಂಥ ಪ್ರಸಂಗನ ಬಂದಿದ್ದಿಲ್ಲ. ಪ್ರಯತ್ನ ಮಾಡಲಿಕ್ಕೆ ಅಡ್ಡಿ ಇದ್ದಿಲ್ಲ.

"ಕೊಡು ನನ್ನಕಡೆ, ನಡಿತದೇನು ನೋಡೋಣ." ನಾ ಅಂದೆ,

ರಾಮು ಹೂಂ ಅಂದ ಹೋದ. ರಾತ್ರಿ ಒಂದು ರೂಪಾಯಿ ತಂದು ನನ್ನಕಡೆ ಕೊಟ್ಟ. ಬೆಲೆಯುಳ್ಳ ರತ್ನ ಕೊಟ್ಹಾಂಗ ತಂದುಕೊಟ್ಟ. ನನ್ನ ಕೈಯಾಗ ಕೊಡೋ ಮುಂದ ಅವನ ಎದಿ ಡವಡವ ಅನಸೋದು ನನಗೆ ಕೇಳಿಸತಿತ್ತು. ಯಾರಿಗೆ ಗೊತ್ತು ಮಾಸ್ತರ ರೂಪಾಯಿ ತಿಂದರ ?

## ೭

ಶನಿವಾರ ಸಾಲಿ ಮುಗಿಸಿ ನಾನು ವಿಭೂತಿವಾಡಿಗೆ ಹೋದೆ. ಅಲ್ಲಿ ಒಂದುವರೆ ದಿನ ಉಳಿದು ತಿರುಗಿ ಸಾಲಿಗೆ ಹಾಜರಾದೆ. ರಾಮುನ ರೂಪಾಯಿ ಮುರಿಸಿದ್ದರ ನೆನಪಾಯಿತು. ನಾಲ್ಕಾರು ದಿನ ರಾಮು ಸಾಲಿಕಡೆಗೆ ಹಾಯ್ದಿದ್ದಿಲ್ಲ. ಯಾಕ ಬರಲಿಲ್ಲ ಅಂತ ಕೇಳಿದಾಗ, ಅವಂದ ಒಂದು ಕುರಿ ಕಳದಿತ್ತು ಅದನ್ನ ಹುಡುಕಲಿಕ್ಕ ಹೋಗಿದ್ದ ಅಂತ ತಿಳಿಯಿತು.

ಅವ ಸಾಲಿ ಕಡೆಗೆ ಬಂದಾಗ ಕಿಸೆಯೊಳಗಿಂದ ರೊಕ್ಕ ತಗದು ಅವನ ಕೈಯಾಗ ಕೊಟ್ಟೆ, "ನಿಮ್ಮ ರೂಪಾಯಿ ಮುರಿಸೇನಿ, ಈ ಚಿಲ್ಲರ ತಗೊಳ್ಳಿರಿ" ಎಂದು ಹೇಳಿದೆ.

ನಾನು ಕಲಿಸಲಿಕ್ಕೆ ಹತ್ತಿದೆ. ಧೋತರ ಚುಂಗಿನಾಗ ಕೊಟ್ಟ ಚಿಲ್ಲರ ಕಟಿಕೊಂಡು ಯಾವಾಗ ಅವ ಹೋದ ಅದ ತಿಳಿಲಿಲ್ಲ.

ರಾತ್ರಿ ಊಟಮಾಡಿ ಓದಕೋತ ಕೂತಿದ್ದೆ, ಅಷ್ಟರಾಗ ರಾಮು ಬಂದ. ನೆಲದ ಮೇಲೆ ಕೂತ. ನಾ ಕೇಳಿದೆ,

"ರಾಮುಭಾವು, ಕುರಿ ಸಿಕ್ಕತೇನು ?"

"ಸಿಕ್ಕತು. ನಮ್ಮ ಹತ್ತರಿದ್ದ ತಾಂಡೆದಾಗ ಸಿಕ್ಕಿತು !"

"ನಾಕ ದಿವಸ ಯಾಕ ಬೇಕಾದವು ?"

ಇಲ್ಲ. ಹಾಂಗ ಮೆಟಕರವಾಡಿಗೆ ಬೀಗರ ಕಡೆಗೆ ಹೋಗಿದ್ದೆ."

ನಾ ಓದಲಿಕ್ಕೆ ಹತ್ತಿದೆ. ರಾಮು ಅಂದ,

"ಮಾಸ್ತರ, ಚಿಲ್ಲರ ಎಲ್ಲಿಂದ ತಂದಿರಿ ?"

ಒಬ್ಬ ಶೆಟ್ಟಿ ಗುರುತಿನವ ಇದ್ದ, ಅವನ ಕಡಿಂದ ತಂದೆ"

"ನಾ ಅದನ್ನ ಕೇಳಲಿಲ್ಲ. ಟೊಂಕದಾಗ ಇಟ್ಟಿದ್ದಿರೋ ಏನು ಕಿಸೆದಾಗ ?"

ಅವ ಕೇಳಿದ ಪ್ರಶ್ನ ಅರ್ಥ ನನಗಾಗಲಿಲ್ಲ.

"ಪಾಯಜಮಾದ ಕಿಸೆದಾಗ ಹಾಕಿ ತಂದಿದ್ದೆ, ಯಾಕ ?"

"ಆಗದಿ ಖಾತ್ರಿ ?"

"ಹೌದು, ಆದರ ಯಾಕ ?"

"ಅದರಾಗ ನಿಮ್ಮ ಚಿಲ್ಲರ ಏನಾರ ಕೂಡಿತ್ತೇನು ? ನೆನಪು ಮಾಡಿಕೊಳ್ಳರಿ"

ಉತ್ತರ ಕೊಡಲು ಸ್ವಲ್ಪ ತಡವಾಯಿತು.

"ಹೌದು ಇತ್ತು, ಆದರೂ ಯಾಕ ?"

"ಹಾಂಗಾರ ಲೆಖ್ಖ ಹತ್ತ್ಯ. ನಿಮ್ಮ ಕಡಿಯಿಂದ ರೊಕ್ಕ ಹೆಚ್ಚ ಬಂದದ."

ಹೀಗಂದು ಚಂಚಿ ತಗಾದು ಎರಡು ಆಣೆ ನನ್ನ ಮುಂದ ಇಟ್ಟ. ಎರಡು ಆಣೆ ನೋಡಿದ ಕೂಡಲೆ ನನಗ ಎಲ್ಲ ಅರ್ಥವಾಯಿತು. ಮುಡಿ ಇದ್ದ ರಾಣೀ ಛಾಪಿನ ರೂಪಾಯಿ ಬಂದಾಗಿದ್ದರೂ, ಅದರಲ್ಲಿಯ ಬೆಳ್ಳಿಯ ಪ್ರಮಾಣದ ಮೂಲಕ ವ್ಯಾಪಾರಸ್ಥರು ಎರಡು ಆಣೆ ಹೆಚ್ಚು ಕೊಡತಿದ್ದರು. ಹಾಂಗ ರಾಮನ ರೂಪಾಯಿಗೆ ಹದಿನೆಂಟು ಆಣೆ ಬಂದಿದ್ದವು. ಚಿಲ್ಲರ ಕೊಡೋ ಮುಂದ ನಾ ಇದನ್ನ ಅವಗ ಹೇಳಲಿಕ್ಕೆ ಮರತಿದ್ದೆ. ರಾಮ ಮನಿಗೆ ಹೋಗಿ ನಾಲ್ಕು ನಾಲ್ಕು ಆಣೆವು ನಾಲ್ಕು ಗುಂಪು ಮಾಡಿದ. ಎರಡು ಆಣೆ ಹೆಚ್ಚು ಉಳಿದವು. ಮಾಸ್ತರ ತಪ್ಪಿ ಎರಡ ಆಣೆ ಹೆಚ್ಚು ಕೊಟ್ಟಾನ ಅಂತ ತಿಳಿದು ಚೌಕಶಿ ಮಾಡಲಿಕ್ಕೆ ಬಂದಿದ್ದ.

ನಾನು ಅವನಿಗೆ ಎಲ್ಲ ಹಕೀಕತ್ತು ತಿಳಿಸಿದೆ ಮತ್ತು ಎರಡು ಆಣೆ ತಿರುಗಿ ಕೊಟ್ಟೆ. ಅದರಾಗೊಳಗಿಂದ ಒಂದು ಆಣೆ ತಿರುಗಿ ನನ್ನ ಕಡೆ ಒಗೆದು ಅವ ಅಂದ,

"ಯಲಿಅಡಿಕಿಗೆ ಇರಲಿ, ಮಾಸ್ತರ"

ನಾನು ಅವನ್ನು ತಗೊಳಲಿಲ್ಲ. ರಾಮ ಎಷ್ಟು ಹೇಳಿಕೊಂಡರೂ ತಗೊಳ ಲಿಲ್ಲ.

"ಹಾಂಗಾರ ಈ ರೂಪಾಯಿ ನಡಿತಾವ ಅಂದ್ಹಾಂಗ ಆತು"

"ನಡೀತದ ಯಾಕ, ರೂಪಾಯಕ ಎರಡು ಆಣೆ ಹೆಚ್ಚು ಸಿಗತಾವ"

"ಇದೆಲ್ಲ ನಮಗ್ಯಾಂಗ ಗೊತ್ತು ! ಊರಾಗ ಇಂಥ ರೂಪಾಯಿ ಬಹಳ ಮಂದಿ ಕಡೆ ಅದಾವ. ನನ್ನ ಕಡೆನೂ ಹತ್ತ ಹನ್ನೆರಡ ಅವ. ಮುರಿದು ತರತಿದೀ ?"

"ಊರಾವರ ಉಸಾಬರಿ ನಿನಗ್ಯಾಕ ? ಅವರದವರು ನೋಡಕೊತಾರ. ನಿಮ್ಮ ಹತ್ತರ ಇದ್ದರ ಕೊಡು, ನಾ ಮುರದ ತರತೀನಿ."

ಮರುವಾರ ನಾ ಹೋದಾಗ ಹನ್ನೆರಡು ರೂಪಾಯಿ ಕೊಟ್ಟ. ನಾನೂ ಅವಗ ಮುರದು ತಂದು ಚಿಲ್ಲರ ಕೊಟ್ಟೆ. ಮತ್ತ ನಾಲ್ಕಾಣೆ ಯಲಅಡಕಿಗೆ ಕೊಡಲಿಕ್ಕೆ ಬಂದ, ನಾ ತಗೊಳಲಿಲ್ಲ.

ರಾತ್ರಿ ನನಗ ಮನಿಗೆ ಕರೆದ. ಮನ್ಯಾಗ ಬಾಗಿ ಒಳಗೆ ಹೋದೆ. ಒಳಗೆಲ್ಲ ಕತ್ತಲಿತ್ತು. ಅರವತ್ತು ದಾಟಿದ ಮುದಕ ಒಲಿಮುಂದ ಚಿಲಮಿ ಸೇದಕೋತ ಕೂತಿದ್ದ. ಅವನ್ನ ತೋರಿಸಿ ರಾಮ ಅಂದ,

"ಇವ ನಮ್ಮಪ್ಪ"

ಮೈತುಂಬ ಚಾದರ ಹೊತಗೊಂಡು ಕೂತ ಮುದಕ, ಗಡಿಬಿಡಿಲೆ ಕೈ ಹೊರಗೆ ತೆಗದು, ನನಗ ಶರಣಮಾಡಿದ.

"ಯಂಪ್ಪತ್ತ ವರಸ ಆಗ್ಯಾವ. ಎಂಟ ವರಸದವ ಇದ್ದಾಗಿಂದ ಕುರಿ ಕಾಯತಾನ. ಅದರ ಹೊರ್ತು ಮತ್ತೇನು ಗೊತ್ತಿಲ್ಲ ಇವಗ."

ಈ ಮನಷ್ಯಾ ಎಂಟು ವರ್ಷದವನಿದ್ದಾಗಿಂದ ಇವತ್ತಿನ ತನಕ ಕುರಿ ಕಾಯೋದ ಬಿಟ್ಟು ಮತ್ತೇನು ಮಾಡಿದ್ದಿಲ್ಲ! ಇವತ್ತಿಗೂ ಅದನ್ನ ಮಾಡತಾನ. ಮಾರಿ ತುಂಬ ನೀರಿಗಿ ಇದ್ದವು. ಕೂದಲ ಬೆಳ್ಳಗಾಗಿದ್ದವು. ಮೊಮ್ಮಗನ ಕರಕೊಂಡು ಅಡವಿಗೆ ಹೋಗಿ ಇನ್ನೂ ಕುರಿ ಕಾಯತಿದ್ದ. ಕೈಯ್ಯಾಗ ಕೋಲು ಹಿಡಿಕೊಂಡು ಕುರಿ ಹಿಂದ ಅಡ್ಡಾಡತಿದ್ದ ಚಕಡಿ ಹ್ಯಾಂಗ ಹೂಡತಾರ ಅಂತ ಕೇಳಿದರ ಅವಗ ಹೇಳಲಿಕ್ಕೆ ಬರತಿರಲಿಕ್ಕಿಲ್ಲ. ಆದರ ನಾಯಿಗ ಬಂದ್ಹಾಂಗ ತೋಳನ ವಾಸನೆ ಅವಗ ಬರತಿತ್ತು. ರಾತ್ರಿ ಹೊಲದಾಗ ಕುರಿ ಕೂಡಿಸಿದಾಗ, ಮೂಗ 'ಸುರುಸುರು' ಮಾಡಕೋತ ಮುದಕ ಅನ್ನವ, "ಜೋಕಿ ಹುಡುಗ, ತೋಳ ಸಮೀಪ ಐತಿ."

ಹುಡುಗರು ಜೋಕೆಯಿಂದ ಇರಾವರು. ನಾಯಿ ಬೆದರಿ ಅತಲಾಗ ಇತಲಾಗ ನೋಡತಿತ್ತು ಮತ್ತು ದೂರ ನೋಡಿದರ, ಎತ್ತರ ಮ್ಯಾಲೆ ನಿಂತ ತೋಳ ಕಾಣಿಸತಿತ್ತು! ಹೀಂಗ ಎಚ್ಚರಿರೊ ರೂಢಿಯಾಗಿ ಅದು ಅಡ್ಡಾಗಿ ಮಲಗೋದ ಮರತಿದ್ದ! ಕುದುರಿ, ಯತ್ತು ನಿಂತಲ್ಲೆ ಕೂತಲ್ಲೆ ಮಲಗೊ ಹಾಂಗ ಇವ ಕೂತಲ್ಲೆ ಮಲಕೊತಿದ್ದ, ಅಡ್ಡಾಗೊ ಗರಜು ಅವಗ ಅನಿಸಿತಿದ್ದಿಲ್ಲ! ಒಂದು ಹಿಂಡಿನ್ಯಾಗ ಇದ್ದ ಕುರಿ ಇನ್ನೊಂದು ಹಿಂಡಿನಾಗ ಕೂಡಿದರ ಅದರ ಗುರ್ತ ಹ್ಯಾಂಗ ಹಿಡಿತಾರ ಅಂತ ನಮಗ ಅನಸತದ. ಅದರ ಮುಂದಕ ಇದರಾಗ ಒಳೆ ತರಬೇತ ಇದ್ದ. ಹೊಸ ಕುರಿ ಹಿಂಡ ಮಾಡಬೇಕಾದ ಕುರಿ ಮಾರಲಿಕ್ಕೆ ತಗೊಂಡು ಮಾಡತಿರುವದಿಲ್ಲ. ಕುರಿ ಹಿಂಡ ಮಾಡಬೇಕನ್ನವ ಕುರಿ ಇದ್ದವನ ಕಡೆ ಹೋಗಿ, ಬೊಬ್ಬಿಬಟ್ಟ, ಅದರಾಗ ಭಂಡಾರ ಹಾಕಿ, ಕುರಿ ಹಿಂಡಿದ್ದವ ಕಡೆ ಹೋಗಿ ಕೊಡತಾನ.

"ನನಗ ಹಿಂಡುಮಾಡೋದದ" ಆಂತ ಹೇಳತಾನ.

ಹಿಂಡಿದ್ದ ಕುರುಬ ತನ್ನ ಹಿಂಡಿನ್ಯಾಗಿನ ಒಂದು ಕುರಿ ಅವಗ ಕೊಡತಾನ. ಹೀಂಗ ಹತ್ತು ಹದಿನೈದು ಕುರಿ ಕೂಡಿಸಿ ಹೊಸ ಹಿಂಡು ಮಾಡತಾನ. ಅವ ತಾ ಎರಡು ಮೂರು ವರ್ಷದ ನಂತರ ಬೇರೆಯವರಿಗೆ ಹಿಂಡು ಮಾಡಲಿಕ್ಕೆ ಕುರಿ ಕೊಡತಾನ. ಹೀಂಗ ಬೇಡಿತಂದ ಕುರಿ ಮಾರೊ ಹಾಗಿಲ್ಲ, ಕೊಯ್ಯೊಹಾಂಗಿಲ್ಲ ಅಂತ ಕುರುಬರೊಳಗ ನಿಯಮಂ ಆದ. ಈ ನಿಯಮಂ ಯಾರೂ ಮುರಿಯುವದಿಲ್ಲ.

ಕಾಕೂಬಾನ ಕಡೆಯಿಂದ ಹೀಂಗ ಒಂದಂ ಊರಾವ ಹಿಂಡು ಮಾಡಲಿಕ್ಕೆಂದಂ ಎರಡು ಮೂರು ಕುರಿ ತಗೊಂಡು ಹೋಗಿದ್ದ. ಒಂದೆರಡು ವರ್ಷದ ಮ್ಯಾಲೆ ಮುದಕ ಆ ಊರಿಗೆ ಹೋಗಿದ್ದ. ಆಗ ಅವ ಅಂದ,

"ಕಾಕೂಬಾ, ನೀ ಕೊಟ್ಟ ಕುರಿಮರಿ ಸತ್ತವು!"

"ಸತ್ತವ, ಹಾಂಗಾರ ಅದರ ಮರಿ ಎಲ್ಯವ?"

"ಎಲ್ಲ ಮರಿ ಬೀಜಾನ ಮುರಿತು!"

ಮುದಕ ಈ ಮಾತ ನಂಬಲಿಲ್ಲ. ಆ ಮನಷ್ಯ ತನ್ನ ದಡ್ಡಿಗೆ ಅವನ್ನ ಕರಕೊಂಡು ಹೋದ. ಬಹಳ ಹೊತ್ತು ಕುರಿ ನೋಡಕೊತ ಅಡ್ಡ್ಯಾಡಿದ. ಆಮೇಲೆ ತಾ ಕೊಟ್ಟ ಕುರಿಗಳ ಮರಿ ಹುಡುಕಿ ತಗದು ಅಂದ,

"ಈ ಎರಡೂ ಮರಿ ನನ್ನ ಕುರಿವವ ನೋಡು."

ಈ ಮಾತು ಕೇಳಿ ಆ ಕುರುಬ ನಾಚಿಕೆಪಟ್ಟು ತನ್ನ ತಪ್ಪು ಒಪ್ಪಿದ,

ರಾಮು ತನ್ನ ಅಪ್ಪನ ಈ ಕಥಿ ಹೇಳಿದ. ಅದನ್ನ ಕೇಳಿ ನಾನು ಅಚ್ಚರಿಗೊಂಡೆ. ನಾ ಕಾಕೂಬಾಗೆ ಕೇಳಿದೆ,

"ನೀ ಯ್ಹಾಂಗ ಗುರ್ತ ಹಿಡಿದಿ?"

"ಅದರಾಗೇನ ಶಹಾಣೆತನ ಐತಿ. ಮಾರಿ, ಬಣ್ಣ ಆಕಾರ ತಿಳಿಯದ ಹ್ಯಾಂಗ ಹೋಗತಾವ? ಈಗ ನೀ ಇದ್ದೀವಿ—ನಿಮ್ಮಪ್ಪ ಇಲ್ಲದರ ನಿಮ್ಮವ್ವ ಇವರದೇನಾದರ ನಿನ್ನಾಗ ಇದ್ದ ಇರತೈತಿ. ಕಿವಿ, ಮೂಗು, ಕಣ್ಣು—ಯಾದರಾಗವ ಅವರಾಂಗ ಇದ್ದ ಇರತದ !"

ರಾಮು ನನಗ ಒಳಗೆ ಬರಲಿಕ್ಕೆ ಹೇಳಿದ. ಚಿಮಣಿ ಬೆಳಕಿನ್ಯಾಗ ಅವ ಒಳಗೆ ಹೋಗಿ ಒಂದು ಗಡಿಗೆ ತಗೊಂಡು ಬಂದ. ಅದರಾಗ ಮುಡಿ ಇದ್ದ ರಾಣೀ ಛಾಪಿನ ರೂಪಾಯಿ ತುಂಬಿದ್ದವು. ನಾ ದಂಗುಬಡದು ನೋಡಕೊತ ನಿಂತೆ. ಈ ಕುರುಬನ ಹತ್ತರ ಇಷ್ಟು ರೂಪಾಯಿ ಹ್ಯಾಂಗ ಬಂದವು. ಇಷ್ಟ ಇದ್ದಾವ ಅಂತ ಅನಿಸಿದ್ದಿಲ್ಲ.

"ಭಾಳ ವರಸ ಹಾಂಗ ಕೂಡಿಕೊತ ಬಂದಾವ. ಅವನ್ನ ಎಣಿಸಿ ನಿನ್ನ ಸಂಗತಿಲೆ ತಗೊಂಡು ಹೋಗು."

ನಾ ಎಣಿಸಿದೆ. ಅವು ಮುನ್ನೂರಾ ನಾಲ್ವತ್ತು ಇದ್ದವು. ನನ್ನ ಲೆಖ್ಖ ರಾಮು ಒಪ್ಪಿದ ಮತ್ತು ಸಂಪೂರ್ಣ ನಂಬಿಗೆ ಇಟ್ಟು ನನ್ನ ಕೈಯಾಗ ಕೊಟ್ಟ. ಮಾಸ್ತರ ಒಂದು ಕಡಿಮೆ ಎಣಿಸಿದ್ದಾನೆಂಬ ಸಂಶಯ ಅವನಿಗೇನು ಬರಲಿಲ್ಲ.

ನಾ ಅಂದೆ, "ರಾಮುಭಾವು, ಈ ರೂಪಾಯಿ ಮುರಿಸಿ ನಿಮಗ ಕೊಡಬೇಕಾದರ ನಾಕೆಂಟು ದಿನ ಹಿಡಿಯಬಹುದು. ನಿಮಗೇನು ಅಡಚಣಿ ಇಲ್ಲಲ್ಲ?"

ರಾಮು ಅಂದ, "ಸಾವಕಾಶ ಆಗಲಿ, ಒಂದು ತಿಂಗಳ ಹತ್ತಿದರೂ ಅಡ್ಡಿ ಇಲ್ಲ." ನಾನು ಎದ್ದು ಮನಿಗೆ ಬಂದೆ.

## ೮

ಮೇ ತಿಂಗಳು ಮುಗಿದು ಜೂನ ತಿಂಗಳು ಬಂದಿತು. ಬೇಸುಗೆ ಮುಗಿದು ಮಳೆಗಾಲ ಬಂತು. ಕಾಮನಬಿಲ್ಲು ಮೂಡಿತ್ತು. ಮೃಗ ಪ್ರಾರಂಭವಾಯಿತು. ರಣರಣ ಬಿಸಿಲು ಮಾಯವಾಯಿತು. ಗಾಳಿ ಬೀಸಿ ಗಿಡಗಂಟಿಗಳು ನಡುಗಹತ್ತಿದವು. ಆಕಾಶದಲ್ಲಿ ಧೂಳಿ ಕಣ ಕಾಣುತಿದ್ದವು. 'ಈ ಗಾಳಿ ಇನ್ನ ಮಳಿ ಓಡಿಸತದ' ಅಂತ ಜನ ಅನ್ನಹತ್ತಿತು. ಆದರೆ ಹಾಗಾಗಲಿಲ್ಲ. ಮಳೆ ಧಾರಾಕಾರವಾಗಿ ಬಂದು, ಮೃಗ ಬನಗರವಾಡಿಯನ್ನು ತೋಯಿಸಿತು. ಮಳೆ ಬೇಗ ಬಿಡುವ ಲಕ್ಷಣ ತೋರುತ್ತಿದಿಲ್ಲ. ಬೀಡಾಡಿ ನಾಯಿ ಗೋಡಿ ವಾರಿಗೆ ನಿಂತವು. ತೊಯಿಸಿಕೊಂಡ ಕುರಿಗಳನ್ನೆಲ್ಲ ಕುರುಬರು ಒಂದೆಡೆ ಗುಡಿಸಲಗಳಲ್ಲಿ ಕೂಡಿಸಿದರು. ಗುಂಪುಗುಂಪಾಗಿ ಹತ್ತಿಕ್ಕಿ ನಿಂತ ಕುರಿ ಮೈ ಝಾಡಿಸಹತ್ತಿದವು. ತೊಯ್ದು ಉಣ್ಣಿ ನಾತ ಮನೆತುಂಬ ಹಬ್ಬಿತು. ಮಳೆ ಸುರಿಯುತ್ತಲೇ ಇತ್ತು. ಕಾಯ್ದ ಭೂಮ್ಯಾಗಿಂದ ಉಗಿ ಹಾಯುತಿತ್ತು. ಧೂಳ ಕೂತು ರಾಡಿಯಾಯಿತು. ರಾಡೀನೂ ಹರಿದುಹೋಗಿ ದಾರಿತುಂಬಾ ಕಲ್ಲು ಕಾಣಿಸಹತ್ತಿದ್ದವು.

ತೊಗರಿ ಕಟಿಗೆ ಛಪ್ಪರಗಳಿದ್ದ ಗುಡಿಸಲಗಳಲ್ಲಿ ಸೋರಹತ್ತಿತ್ತು. ಸಾರಿಸಿದ ನೆಲದ ಮ್ಯಾಲೆ ನೀರ್ಹನಿ ಬಿದ್ದು ತಗ್ಗುಬೀಳಲಿಕ್ಕೆ ಹತ್ತಿದವು. ಅದಕ್ಕೆ ಬೇಸರಪಟ್ಟು ಸೋರೊ ಜಗಾದಾಗ ಗಡಿಗಿ ಪಾತ್ರಿ ಇಟ್ಟರು. ಕುರಿ ಸದ್ದಿನಲ್ಲಿಯೂ 'ಟಪಟಪ' ಬೀಳುವ ನೀರಿನ ಸಪ್ಪಳ ಕೇಳಿಸತಿತ್ತು. 'ಟಪಟಪ' ಸಪ್ಪಳ ಕೇಳಿಕೇಳಿ ಕಿವೀ ಸೋತವು.

ಮೇಲ್ಮುದ್ದಿಗಳಿದ್ದ ಮನೀನೂ ಸೋರಹತ್ತಿದವು. ತಲಿಮ್ಯಾಲೆ ಚೀಲಾ ಹೊತಗೊಂಡು ಕುರುಬರು ಮಾಳಗಿ ಹತ್ತಿ ಬಿದ್ದ ತೂತಗಳನ್ನು ಮಣ್ಣುಹಾಕಿ ಮುಚ್ಚತಿದ್ದರು.

ಹವೆ ತಂಪಾಯಿತು. ಕುರುಬರ ಕೊಡ್ಲಿ ಜಂಗತಿನ್ನಹತ್ತಿದವು. ಹೆಣ್ಣುಮಕ್ಕಳು ಇಟ್ಟ ಉಪ್ಪು ಕರಗಹತ್ತಿತು.

ಹಸಿರುಹುಲ್ಲು ತಲೆದೋರಹತ್ತಿತು. ಅಂಗಳದಾಗ, ಮಾಳಗಿಮ್ಯಾಲೆ, ಛಪ್ಪರ ಮ್ಯಾಲೆ, ಎಲ್ಲೆಲ್ಲಿ ಬೇಡಾಗಿತ್ತು, ಅಲ್ಲಲ್ಲಿ ಹುಲ್ಲು ಬೆಳೆಯಹತ್ತಿತು. ನೋಡಿದಲ್ಲೆಲ್ಲ ಹಸಿರು ಕಾಣುತ್ತಿತ್ತು.

ಹೆಬ್ಬೆಟ್ಟಿನ ಉಗುರಮೇಲೆ ಕೂಡೊವಷ್ಟು ಸಣ್ಣ ಕಪ್ಪಿಮರಿ ಒಮ್ಮೆಲೆ ಕಾಣಹತ್ತಿದವು. ಹಾದ್ಯಾಗ ಟಣಾಪಣಾ ಜಿಗಿಯಹತ್ತಿದವು. ಕಾಗಿ ಹಾರಿಬಂದು ಅವನ್ನು ತಿನ್ನುತ್ತಿದ್ದವು. ಚಿಕ್ಕಚಿಕ್ಕ ಪಕ್ಕಗಳಿದ್ದ ಸಾವಿರಾರು ಹುಳ ಅತಲಾಗಿಂದ ಇತಲಾಗ ಹಾರಾಡತಿದ್ದವು. ಪಕ್ಷಿಗಳು ಬಂದು ಈ ಹುಳಗಳನ್ನು ತಿನ್ನುತ್ತಿದ್ದವು. ಹಕ್ಕಿ ಕೈಯೊಳಗಿಂದ ಪಾರಾದ ಹುಳಗಳ ತೆಳ್ಳನ್ನ ರೆಕ್ಕೆ ಉದುರಿದ್ದವು. ಹಳದಿ ಬಣ್ಣದ ಈ ಬಾಲ

ಹುಳಾನೂ ಕಾಣದಂತಾದವು. ಇಟ್ಟಂಗಿ ಬಣ್ಣದ ಉದ್ದಾದ ಹುಳಗಳು ಒಂದರ ಬೆನ್ನ ಮೇಲೆ ಇನ್ನೊಂದು ಹತ್ತಿ ಸಾವಿರಾರು ಕಾಲುಗಳಿಂದ ನಡೆಯುತ್ತಿದ್ದವು. ಕಪ್ಪು ಬಣ್ಣದ ಚಿಟ್ಟಿ ಬೆನಕ ಸಾವಕಾಶ ಆಲಸಿತನದಿಂದ ನಡೆಯುತಾ ಇದ್ದವು. ಯಾತರದಾರ ಸ್ಪರ್ಶ ಆದರ ಅವು ಸುತ್ತಿಕೊಳ್ಳುತ್ತಿದ್ದವು. ಹುಡುಗರು ಅವನ್ನ ಕೈಯಾಗ ಹಿಡಿದು ದುಡ್ಡಿನ್ಹಾಂಗ ಆಡಿಸುತ್ತಿದ್ದರು. ಗುಡಿಸಲದಾಗ ನೊಣಗಳ ಕಾಟ ವಿಪರೀತವಾಗಿತ್ತು. ಕುರಿ ಮೂಗಿನ ಮ್ಯಾಲೆ ಕೂಡತಿದ್ದವು. ಕುರುಬರ ಕಣ್ಣಮುಂದ ನೊರಜು ಹಾರಾಡತ್ತಿದ್ದವು.

ರಂಟೆ ಹೊಡೆದ ಹೊಲದಾಗಿನ ಹೆಂಡಿ ಕರಗಿದ್ದವು. ಭೂಮಿ ನೀರುಂಡು ಶಾಂತವಾಗಿತ್ತು. ಗುಂಡಿಗಳೆಲ್ಲ ನೀರಿನಿಂದ ತುಂಬಿದ್ದವು. ನೀರಿನಲ್ಲಿ ಮುಗಿಲಿನ ಪಡಿನೆರಳು ಕಾಣತಿತ್ತು—ಕಪ್ಪು, ನೀಲ ಬಣ್ಣದ್ದು. ಅಡವ್ಯಾಗ ಹೋಗಿ ಬರುವ ಜನ, ದನ, ಕುರಿಗಳ ಕಾಲು ರಾಡಿಯಾಗತಾ ಇದ್ದವು. ತೊಯ್ದು ಬೈಲಿನಲ್ಲಿ ಬೆಳೆದ ಹಸಿರು ಹುಲ್ಲನ್ನು ಕಪ್ಪು ಕುರಿಗಳು ಮೇಯುತ್ತಿದ್ದವು. ಕುರಿಗಳ ಬೆನ್ನಮೇಲೆ ಕೊತವಾಲ ಪಕ್ಷಿಗಳು ಕೂತು ಗೊಗ್ಗರದನಿ ಮಾಡುತ್ತಿದ್ದವು. ಯಾರ ಕಣ್ಣಿಗೂ ಬೀಳದ, ಜಾಗ್ರತೆಯಿಂದ ಇರುವ ಚಿತ್ತೂರ ಹಕ್ಕಿಯೂ ಏರದನಿಯಲ್ಲಿ ಶಬ್ದ ಮಾಡತಿತ್ತು.

ಇಂಥ ವ್ಯಾಳ್ಯಕ್ಕ ಸಾಲಿ ಸುರು ಆಗಬೇಕು, ಇಂಥ ವ್ಯಾಳ್ಯಕ್ಕೆ ಬಂದು ಮಾಡಬೇಕೆಂಬ ಮಾತು ಬನಗರವಾಡಿ ಸಾಲಿ ವಿಷಯದಲ್ಲಿ ಸಾಧ್ಯವಿದ್ದಿಲ್ಲ. ಎಲ್ಲಾರಿಗೂ ಬ್ಯಾಸಗ್ಯಾಗ ಸೂಟಿ ಇದ್ದರ. ಬನಗರವಾಡ್ಯಾಗ ಸೂಟಿ ಸುಗ್ಯಾಗ ಇರತಿತ್ತು. ಪ್ಯಾಸೆಂಜರ ತುಂಬಿದ ಮ್ಯಾಲೆ ಸರ್ವ್ಹಿಸ ಬಸ ಬಿಡೋಹಾಂಗ, ಹುಡುಗರು ಬಂದಮ್ಯಾಲೆ ಮಾಸ್ತರಗ ಸಾಲಿ ಸುರು ಮಾಡಬೇಕಾಗತಿತ್ತು, ಆದ್ದರಿಂದ ಸಾಲಿಯೇ ಮಾಸ್ತರನ ಕಾರ್ಯಕ್ಷೇತ್ರವಾಗಿ ಉಳಿಯುವದು ಸಾಧ್ಯವಾಗದ ಮಾತಾಯಿತು, ಯಾವನಾರ ಒಬ್ಬವ ಬಂದು ಪತ್ರಾ ಬರೀ ಅನ್ನಾವ, ಇನ್ನೊಬ್ಬವ ಬಂದು ಅರ್ಜಿ ಬರಿಸಿಕೊಳ್ಳಾವ. ಆದಿತವಾರ ನಾನು ಊರಿಗೆ ಹೋಗೊ ಮುಂದ ನನ್ನ ಕಿಸೆ ಅಂದರ ಪೋಸ್ಟಿನ ಡಬ್ಬಿನ ಆಗತಿತ್ತು ಮತ್ತು ಅನೇಕರು ತಮ್ಮ ತಮ್ಮ ಕೆಲಸ ಹೇಳಾವರು. ಗಂಡ ಹೆಂಡತಿ ನ್ಯಾಯ ಹಿಡಿದು ಕುರಿ ಆಡುಗಳ ಕಳವಿನ ತನಕ ಎಲ್ಲಾರೂ ಬಂದು ನನ್ನಮುಂದ ದೂರ ಹೇಳಾವರು. ಮಾಸ್ತರ ಕಲಿತವ, ಅಂದರ ಅವಗ ಕಾಯದೆ ಕಾನೂನ ಎಲ್ಲಾ ಗೊತ್ತಿರಬೇಕು, ಚಲೊ ಕೆಟ್ಟ ತಿಳಿಯೋ ಬುದ್ಧಿನೂ ಇರಬೇಕು !

ಸಾಲಿ ಇರದಿದ್ದರೂ ನನ್ನ ವೇಳ್ಯಾ ಅನೇಕ ತರದ ಕೆಲಸ ಮಾಡುವವದರಲ್ಲಿ ಹೋಗತಾ ಇತ್ತು. ಹುಡುಗರ ಬಹಳ ಕಡಿಮಿ ಅವ ಅಂತ ಮ್ಯಾಲಿಂದ ಸೂಚನೆ ಬಂದಾಗ, ಸುಗ್ಗಿ ಆದ, ಸಾಲಿ ಹೊಸಾದ ಅದ—ಅಂತ ಅನೇಕ ಕಾರಣ ತೋರಿಸಿ ನಾನು ಸಾಲಿ ನಡೆಸುತ್ತಿದ್ದೆ. ನಮ್ಮ ಸಾಲಿ ಅಂದರ ಕೋರ್ಟು, ಕಚೇರಿ. ಮ್ಯುನಿಸಿಪಾಲಿಟಿ, ಚಾವಡಿ ಹೀಂಗ ಯಲ್ಲಾನೂ ಇತ್ತು ! ಮಾಸ್ತರ ಅಂದರ ಜಜ್ಜ, ಫೌಜದಾರ, ಪಾಟೀಲ, ಕುಲಕರ್ಣಿ, ಸ್ಟಾಂಪ ಮಾರಾವ ಆಗಿದ್ದ ! ಸಾಮಾನ್ಯವಾಗಿ ಊರ ಜಗಳ ಊರಾಗ ತೀರತಿದ್ದವು, ಹೊರಗೆ ಹೋಗತಿದ್ದಿಲ್ಲ. ಮಾಸ್ತರ ಮತ್ತು ಕಾರಭಾರಿ, ಕಾಕೂಬಾ, ಶೇಕುಬಾ ಇಂಥ ವಯಸ್ಸಾದವರು ಕೂಡಿ ನ್ಯಾಯ ಕೊಡುವರು. ತಪ್ಪಿತಸ್ಥರು ಹತ್ತು ಮಂದಿ ಹೇಳಿದ ಮಾತು ಸಾಮಾನ್ಯವಾಗಿ ಮೀರುತಿದ್ದಿಲ್ಲ. ಆ ಮಾತಿನಂತೆ ನಡೆಯುವದು ಇರದಿದ್ದರ ದೈವಕ್ಕ ಅಪೀಲು ಮಾಡಲಿಕ್ಕೆ ಬರತಿತ್ತು. ದೈವ ನ್ಯಾಯ ಕೊಡತಿತ್ತು. ಆದರ ಈ ಗೋಜಿಗೆ ಯಾರೂ ಸಾಮಾನ್ಯವಾಗಿ ಹೋಗುತಿದ್ದಿಲ್ಲ. ಹಾಂಗ ಮಾಡಿದರೆ ಇಡೀ ದೈವಕ್ಕೆ ಊಟ ಕೊಡಬೇಕಾಗತಿತ್ತು. ಅದು ದೊಡ್ಡ ಖರ್ಚಿನ ಮಾತಾಗಿತ್ತು.

ವಾಡಿಯಲ್ಲಿ ಮದುವೆಗಳನ್ನು ಸಾಮೂಹಿಕವಾಗಿ ಮಾಡುವ ರೂಢಿ ಇತ್ತು. ವರ್ಷಾ ಒಂದು ಸುಮುಹೂರ್ತ ನೋಡಿ, ಅನೇಕ ಮದುವಿ ಅವತ್ತ ಮಾಡತಿದ್ದರು. ಇದರಿಂದ ಊರೂಟದ ಭಾರ ಒಬ್ಬರ ಮ್ಯಾಲೆ ಬೀಳತಿದ್ದಿಲ್ಲ, ಮದುವೆ ಮಾಡವರು

ಬಂದ ಖರ್ಚು ಹಂಚಿಕೊತಿದ್ದರು, ಯಾವಗಾರ ಅವರಾಗೂ ದುಡ್ಡಿನ ಅಡಚಣೆ ಬಂದರ ದೈವದವರು ಕೂಡಿ, 'ಇಂಥವಗ ರೊಕ್ಕದ ಅಡಚಣೆ ಅದ, ಅದರಾಗಿಂದ ನಾವೆಲ್ಲರೂ ಕೂಡಿ ಅವನ್ನ ಪಾರಮಾಡೋಣ' ಅಂತ ಪಕ್ಕಾ ವಿಚಾರಮಾಡಿ, ಎಲ್ಲರೂ ತಮ್ಮ ತಮ್ಮ ಪಾಲಿನ ಒಜ್ಜೆ ಹೊರತಿದ್ದರು. ಅಡಚಣ್ಯಾಗ ಇದ್ದಾವನೂ ಹೀಂಗ ಪಾರಾಗತಿದ್ದ,

ದಾದೂನ ಬೆದರಿಕೆಗೆ ನಾನು ಅಂಜದೆ ಊರತವಾದ ವಿಷಯದಲ್ಲಿ ಸಂಪೂರ್ಣ ವಾಗಿ ಬೆರೆತಿದ್ದೆ. ನಾ ಇಲ್ಲದೆ ಯಾವ ಕೆಲಸನೂ ನಡೆಯದಂತಾಗಿತ್ತು.

ವಾಡ್ಯಾಗ ಒಕ್ಕಲತನ ಮಾಡಾವರು ತೀರ ಕಡಿಮೆ ಜನ ಇದ್ದರು. ಮೃಗದ ಮಳೆಯಿಂದ ಭೂಮ್ಯಾಗ ಹುಲ್ಲು ಬೆಳೆಯಿತು. ಬೀಜ ಬಿತ್ತೋಕಿಂತ ಮೊದಲ ಹೊಲ ದಾಗ ರಂಟೆ ಹೊಡೆದು ಹುಲ್ಲನೆಲ್ಲ ಬುಡಮೇಲು ಮಾಡಿದರು. ಪುಷ್ಯ ಮಳೆಯಾಗಿ ಹೊಲದಲ್ಲಿ ರಾಡಿಯಾಗಿತ್ತು. ಹೊರವಾಗುವ ದಾರಿ ಕಾಯ್ದರು. ಹೊರವಾಯಿತು. ರಾಡಿ ಒಣಗಿತು. ತಳಹಸಿ ಹಾಗೆ ಇತ್ತು, ಎತ್ತಿನ ಕಾಲು ಸಿಗಬೀಳದಷ್ಟು ಮತ್ತೂ ಬೀಜಬಿತ್ತುವ ತೂತು ಮುಂಚ್ಚದಷ್ಟು ಭೂಮಿ ಒಣಗಿತ್ತು. ಬಿತ್ತೊ ಗಡಿಬಿಡಿ ಸುರು ವಾಯಿತು. ಸೆಜ್ಜಿ ಅಕಡಿ ಕಾಳುಗಳ ಬಿತಗಿ ಪ್ರಾರಂಭವಾಯಿತು. ಬೀಜ ಉಡ್ಯಾಗ ಕಟಗೊಂಡು ಶೆಡ್ಡು ತಯಾರ ಮಾಡಿ ಒಕ್ಕಲಿಗರು ನಸುಕಿನಲ್ಲಿಯೇ ಹೊಲಕ್ಕೆ ಹೋಗ ಹತ್ತಿದರು.

ಬೀಜಬಿತ್ತೊ ತತಿ ಬಂದದ್ದ ನೋಡಿ ಶೇಕು ಒಂದು ದಿನ ನನ್ನಕಡೆ ಬಂದನು. ಅವ ಊರಾಗ ವಿಶೇಷ ಇರತಿರಲಿಲ್ಲ. ತನ್ನ ಎರಡು ಎಕರೆ ತುಂಡಿನ್ಯಾಗ ದುಡಿಯಾದ ರಾಗ ಗುಂಗಾಗಿರತಿದ್ದ. ಮೈಮ್ಯಾಲೆ ಧೋತರ ಹೊತಗೊಂಡು 'ಚುಮಚುಮ' ಅನ್ನುದರಾಗ ಬಂದಿದ್ದ. ಪಾದದ ಮ್ಯಾಲೆ ಬೆಳೆದ ಉಗುರು ಮತ್ತು ಬಾಡಿದ ಮುಖ ಅಷ್ಟ ಕಾಣತಿದ್ದವು. ಉಳಿದ ಮೈಯೆಲ್ಲ ಧೋತರಲೆ ಮುಚಿಗೊಂಡಿದ್ದ.

ನಾನು ಕೂತಿದ್ದೆ, ಆಯಬೂನೂ ಕೂತಿದ್ದ. ನಿಂತಲ್ಲಿಂದ ಶೇಕು ಅಂದ,

"ಮಾಸ್ತರ ಬಿತ್ತೊದು ಹರಕತ ಆಗೈತಿ, ಒಂದು ಯತ್ತ ಕೊಡಸು !"

ನಾನು ಒಬ್ಬ ಸಾಲಿ ಮಾಸ್ತರ. ನನ್ನಲ್ಲಿ ಯತ್ತೆಲ್ಲಿಂದ ಬರಬೇಕು? ಆದರ ಇದನ್ನೆಲ್ಲ ಶೇಕೂಗ ಹೇಳೊದರಾಗ ಅರ್ಥವಿದ್ದಿಲ್ಲ. ಅವ ಮತ್ತ ಅಂದ, "ನನ್ನ ಕಡೆ ಒಂದು ಯತ್ತ ಐತಿ, ನೀ ಬೇಡಿದರ ಕೊಡತಾರ. ನನ್ನ ಇನ್ನೊಂದು ಯತ್ತು ಸತ್ತೈತಿ ಮತ್ತ ನೀ ಇಲ್ಲ ಅಂದರ ಇಡೀ ವರಸ ನನ್ನ ಪಾಲಿಗೆ ಉಪವಾಸನ ಐತಿ."

ನಾ ಅಂದೆ, "ಯಾರ ಹತ್ತಿರ ಅದ ಹೇಳು, ಅಂದರ ನಾ ಹೇಳತೇನಿ."

"ಯತ್ತ ಇದ್ದವರೆಲ್ಲಾ ಬಿತಿಗ್ಯಾಗ ತೊಡಗ್ಯಾರ, ತಮ್ಮ ಕೆಲಸ ನಿಲ್ಲಿಸಿ ಕೊಡಾವ ಯಾವಾ? ಎಲ್ಲರ ಕಡೆನು ಬೇಡಿ ಆಗೈತಿ."

"ಹಾಂಗಾರ, ನಾ ಇನ್ನ ಯಾರ ಕಡೆ ಬೇಡಲಿ?"

"ನೀ ಏನು ಬೇಕಾದ್ದು ಮಾಡು. ನನ್ನ ಗರಜ ಐತಿ, ಅದನ್ನ ಪೂರೈಸು. ಮಾಸ್ತರ ವ್ಯಾಳ್ಯಾಕ ಉಪಯೋಗ ಬೀಳತಾನಂತ ಇಡೀ ಊರ ಅಂತೈತಿ. ಹಾಂಗಾರ ನನ್ನ ಪಾಲಿಗೆ ಹೀಂಗ್ಯಾಕ ಅಂದೆ."

ಈ ಮಾತು ಆಗೋತನಕ ಆಯಬೂ ಸುಮ್ಮನಿದ್ದ. ಆವ ಶೇಕೂನ ಕಡೆ ಮಾರಿ ಮಾಡಿ ಅಂದ,

"ಹೊಗ, ಹುಂಚ್ಟಿ ! ಮಾಸ್ತರನ ಕಡೆ ಎಲ್ಲಿ ಬರಬೇಕು ಯತ್ತು? ಅವ ಏನು ಒಕ್ಕಲಿಗನ? ಏನಾರ ಯಲ್ಯಾರ ಕೇಳೊದು ! ಹೋಗ ಮನಿಗೆ."

ಆಯಬೂನ ಮಾತ ಕೇಳಿ ಶೇಕೂನ ಮಾರಿ ಮತ್ತಿಷ್ಟು ಬಾಡಿತು. ತಾ ತಪ್ಪ ಮಾಡೇನೇನು ಅಂತ ಅನಿಸಿತು.

"ಮನಿಗೆ ಹೋಗೊದು ಐತಐತಿ. ನೋಡ ಮಾಸ್ತರ, ಕೂಡಿದರ" ಅಂತ ದುಲ್ಲಕ ಹೇಳಿದ.

ಆಯಬೂ ಎದ್ದು, ಶೇಕೂನ ಕೈಹಿಡಿದು ಅವಗ ಕೆಳಗ ಇಳಿಸಿ ಅಂದ.

"ಒಳೇ ಶಾಹಾಣ್ಯಾ ಕಾಣತಿ ಅಲ್ಲೋ ಶೇಕು ! ಮಾಸ್ತರ ಏನು ಯತ್ತ ಟೊಂಕಿ ನ್ಯಾಗ ಇಟ್ಟಾನ?"

ಜೋರಾಗಿ ಪುಟುಪುಟು ಮಾತಾಡಕೋತ ಶೇಕು ಹೋದ. ಆಯಬೂ ಒಳಗ ಬಂದು ಅಂದ,

"ಹುಚ್ಚ ಅದ ಆತು. ಅವನ ಮಾತು ಮನಸಿಗ ಹಚಿಕೊಬ್ಯಾಡ ಮಾಸ್ತರ !"

ಮತ್ತ ಮತ್ತ ನನ್ನ ಮನಸು ಕಟಿಲಿಕ್ಕೆ ಪತ್ತಿತು. ನಾ ಬರೀ 'ರತಈಕ ಅಷ್ಟೆ ಕಲಿಸತೇನಿ. ಶೇಕೂನ ಗರಜ ಬೇರೆ ಅದ. ಆಯಬೂಗ ಹೆಂಡತಿ ಬೇಕು, ಶೇಕೂಗ ಯತ್ತ ಬೇಕು, ಆನಂದಗ ರೊಟ್ಟಿ ಬೇಕು.

ಎರಡು ದಿವಸ ಶೇಕು ಅಡ್ಡಾಡಿದ. ಅವಗೇನು ಯತ್ತು ಸಿಗಲಿಲ್ಲ. ನಿರಾಶನಾಗಿ ಮನಿಗೆ ಹೋಗಿ ಧಪ್ಪ ಅಂತ ನೆಲದ ಮ್ಯಾಲೆ ಕೂತು ಹೆಂಡತಿಗೆ ಅಂದ,

"ಆಟಾ ನಡಿಯೊವಲ್ಲದು."

ಶೇಕುನ ಹೆಂಡತಿ ಎತ್ತರನ ಆಳಾಗಿದ್ದಳು. ಉಳಿದ ಕುರುಬರ ಹೆಣಮಕ್ಕಳಿಗಿಂತ ಒಂದು ಮೊಳ ಎತ್ತರವಿದ್ದಳು. ಮೈಯಾಗ ತಾಕತೂ ಇತ್ತು. ಒಕ್ಕಲತನದ ಎಲ್ಲ ಕೆಲಸನೂ ಗಂಡಸರ ಜೋಡಿ ಮಾಡತಿದ್ದಳು, ತಲಿಮ್ಯಾಲೆ ಕೈ ಇಟಕೊಂಡು ಕೂತ ಗಂಡನ್ನ ನೋಡಿ ಅಂದಳು,

"ಯಾರ್ಯಾರಿಗ ಕೇಳಿದಿ?"

"ಊರಾಗ ಎಲ್ಲರಿಗೂ ಕೇಳಿವೆ. ಯಾರೂ ಉತ್ತರ ಕೊಡಾಕ ತಯಾರಿಲ್ಲ."

"ಹಾಂಗಾರ ಮುಂದ ಹ್ಯಾಂಗರಿ?"

"ಈ ವರಸ ಉಪಾಸ ಸಾಯೋದು !"

ಗಂಡನ ಮಾತ ಕೇಳಿ, ಎಣ್ಣಿತೀರಿದ ದೀಪದ್ಹಾಂಗ ಅವನ ಕಣ್ಣು ಕಂಡು ಧೈರ್ಯ ದಿಂದ ಅವಳಂದಳು,

"ನಾಳೆ ಬಿತ್ತೋದು."

"ಹೌದ, ಆದರ ಯತ್ತಿಂದ ಹ್ಯಾಂಗ"

"ನಾ ತರತೇನಿ."

"ಎಲ್ಲಿಂದ ತರತೀದಿ?"

"ಬೇಕಾದಲ್ಲಿಂದ."

"ಆದರೂ............ಹೇಳಲ್ಲ..."

"ನಿಮಗ್ಯಾಕ ಆ ಪಂಚೈತಿ. ನೀವು ಲಗು ಎದ್ದು ಬೆಳಗ ಹರಿಯೊದರೊಳಗ ಹೊಲಕ್ಕ ಹೋಗರಿ."

ಈಕಿ ಯಾರ ಯತ್ತ ತರೋ ಆಕಿ ಅಂತ ಲೆಖ್ಖ ಹಾಕ್ಕೊತ ಶೇಕು ಲಗು ಎದ್ದು, ಶೆಡ್ಡು ಹೆಗಲವ್ಯಾಲೆ ಹಾಕ್ಕೊಂಡು, ಇದ್ದ ಒಂದು ಯತ್ತ ತಗೊಂಡು ಹೊಲಕ್ಕ ಹೋದ. ಊರಕಡೆ ಮುಖದೂಡಿ, ಒಡ್ಡಿನವ್ಯಾಲೆ ಹೆಣ್ತಿ ಹಾದಿ ನೋಡಕೊತ ಕೂತ.

ತಾಸಾದವ್ಯಾಲೆ ಆಕಿ ಬರೋದು ನೋಡಿದ. ಆದರ ಆಕಿ ಸಂಗತಿಲೆ ಯತ್ತ ಇದ್ದಿಲ್ಲ. ಶೇಕೂನ ಮುಖ ಬಾಡಿತ್ತು. ಹೆಂಡತಿ ಅನಕ ಪಣ ತೊಟ್ಟಿದ್ದಳು. ಆದರೆ ಆಕೀಗೂ ಯತ್ತು ಸಿಕ್ಕಿದ್ದಿಲ್ಲ. ಇನ್ನ ಬಿತಿಗಿ ಕಥಿ ಮುಗಿತು. ಯಲ್ಲಾರ ಬಿತಿಗಿ ಆದ ಮ್ಯಾಲೆ ಯತ್ತೂ ಸಿಗಬಹುದು. ಆದರ ಅದರ ಉಪಯೋಗವೇನು? ಬಿತ್ತಿದರೂ ಬೆಳಿ ಹಿಕ್ಕಟ್ಟ ಆಗತಾದ. ಬರಾಬರಿ ಬರುದಿಲ್ಲ. ವರಸಕ್ಕೆ ಬೇಕಾಗುವಷ್ಟು ಕಾಳು ಸಿಗುವಂತಿಲ್ಲ, ಅಂದರ ಉಪವಾಸ ವನವಾಸ. ಊರಬಿಟ್ಟು ಕೂಲಿಮಾಡಲಿಕ್ಕೆ ಊರೂರ ಹೋಗೊದು ಬರೋದು.

ಮನಸಿನ್ಯಾಗ ಈ ವಿಚಾರ ಬಂದು ಅವ ಕಳವಳಗೊಂಡ. ಹೊಟ್ಯಾಗ ಕಸಿವಿಸಿ ಯಾತು, ಅಷ್ಟರಾಗ ಆವನ ಗಂಡರಾಮಿ ಹೆಣ್ತಿ ಬಂದು ಇದುರಿಗೆ ನಿಂತಳು.

"ಯತ್ತಿನದೇನಾಯಿತು?"

"ಹೂಡುಶೆಡ್ಡ. ಅದ್ಯಾಕಿಲ್ಲ?"

"ಹೌದ, ಆದರ ಯತ್ತ ಎಲ್ಯದ?"

"ನಾ ಅದೆನಲ್ಲ. ಒಂದು ಹೆಗಲು ನಂದು, ಇನ್ನೊಂದು ಯತ್ತಿಂದು !"

ಹೆಂಡತಿ ಮಾತ ಕೇಳಿ ಶೇಕು ದಂಗುಬಡದು ನಡಗಿದ. ಏನ ಹೇಳಬೇಕು ಆದ ತಿಳಿಲಿಲ್ಲ.

"ಥೂಃ ಇದ್ಯಾಂಗ ಆದೀತ?"

ಹೆಣ್ತಿ ಮನಸನು ಗಟ್ಟಿಮಾಡೇ ಬಂದಿದ್ದಳು, ತನ್ನ ಕಸುವಿನ ಮೇಲೆ ಅವಳ ವಿಶ್ವಾಸವೂ ಇತ್ತು.

ಗಂಡ ಸರಿಯವಲ್ಲ. ಕೂತಲ್ಲೆ ಕೂತ, ಮುಖ ಕೆಳಗೆ ಮಾಡಿ ಕೂತಿದ್ದ. ಅದನ್ನ ನೋಡಿ ಆ ಒಂದು ಯತ್ತನ್ನ ತಾನ ಹೂಡಿದಳು. ಇನ್ನೊಂದು ಕಡೆಗೆ ತಾ ಹೆಗಲುಕೊಟ್ಟು ಬಾಗಿ ನಿಂತಳು. ಆಕಿ ಒದರಿ ಅಂದಳು,

"ಹೂ ಬಿಗಿರಿ ಇನ್ನ."

ಅಶಕ್ತ ಗಂಡ ಎದಿ ಕಲ್ಲಿನ್ಹಾಂಗ ಗಟ್ಟಿಮಾಡಿ ಎದ್ದನು. ಶೆಡ್ಡಿನ ಮ್ಯಾಲೆ ಬೀಜದ ಮುಷ್ಟಿ ಹಿಡಿದು, ಎತ್ತಿಗೆ ಸೊನ್ನಿ ಮಾಡಿದ. ಶೆಡ್ಡು ಮುಂದೆ ಸಾಗಿತು. ಎತ್ತು ಹೆಂಡತಿ ಮುಂದಡಿ ಇಟ್ಟರು. ಭೂಮಿ ಸೀಳತಿತ್ತು, ಬೀಜ ಬೀಳತಿತ್ತು.

ಮೈಯಾಗಿದ್ದ ಕಸುವಿನಿಂದ ಶೇಕೂನ ಹೆಂಡತಿ ಶೆಡ್ಡು ಜಗ್ಗತಿದ್ದಳು. ಮಧ್ಯಾನ್ಹ ತನಕ ಬಿತಿಗಿ ನಡೀತು. ದಣಿವ ಹೆಂಡತಿ ಮತ್ತು ಶೇಕು ಕೂಡೇ ಕೂತು ರೊಟ್ಟಿ ತಿಂದರು. ಶೇಕೂ ಸುಮ್ಮನ ಕೂತಿದ್ದ. ಅವನ ಬಾಯಾಗಿಂದ ಮಾತ ಹೊರಡಲಿಲ್ಲ. ಹೆಣ್ತಿ ಒಂದೆರಡು ಮಾತ ಮಾತಾಡಿದಳು. ಇಬ್ಬರೂ ಕೂಡಿ ಜೋಡಾಗಿ ಬೀಜ ಮಣ್ಣಿನ್ಯಾಗ ಮುಚ್ಚಿದರು. ಸಂಜೆಯೊಳಗ ಎರಡು ಎಕರೆ ಬಿತ್ತಿದ್ದರು. ಸೂರ್ಯ ಮುಳಗಿದ, ಇಬ್ಬರೂ ದಣಿದು ಮನಿಗೆ ಬಂದರು.

ಊರಾಗೆಲ್ಲ ಈ ಸುದ್ದಿ ಹಬ್ಬಿತು. ಕೆಲವರು ಕೌತುಕ ಮಾಡಿದರು, ಕೆಲವರು ನಗಚಾಟಿಗಿ ಮಾಡಿದರು, ಮತ್ತೆ ಕೆಲವರು ಅಚ್ಚರಿಗೊಂಡರು.

ರಾತ್ರಿ ಸಾಲಿಯಿಂದ ಮನಿಗೆ ಹೋಗೋಮುಂದ ಶೇಕೂನ ಮನೀಮುಂದ ಒಂದು ಕ್ಷಣ ನಿಂತು ಹಣಕಿಹಾಕಿದೆ. ಶೇಕೂನ ಹೆಂಡತಿ ಗೋಡಿ ಹತ್ತರ ಬೆನ್ನು ಮ್ಯಾಲೆಮಾಡಿ ಅಡ್ಡಾಗಿದ್ದಳು. ಗೋಡಿ ಹಿಡಿದ ಶೇಕು ಹಗುರಕ ಆಕಿ ಬೆನ್ನ ತುಳಿತಿದ್ದ. ಸಾವಕಾಶವಾಗಿ ಗೋಡಿ ಆಧಾರದಿಂದ ಬೆನ್ನಮ್ಯಾಲೆ ಪಾದಇಟ್ಟು ತುಳಿಯುತ ಇದ್ದ.

ಶನಿವಾರ ಸಾಲಿ ಮುಗಿಸಿ ನಾನು ಊರಿಗೆ ಹೋದೆ. ಆರು ಮೈಲು ನೆಲ ತುಳದ ಬಂದಮ್ಯಾಲೆ ದಣಿದಿದ್ದೆ. ಈ ಹೋಗಿಬರೋದು ಮಾಡಿ ಮಾಡಿ ಬೇಸರಾಗಿತ್ತು. ದೇಹಕ್ಕ ಆಗೋ ಶ್ರಮದ ಮಾತು ಬದಿಗಿಟ್ಟರೂ, ಆರು ಮೈಲು ನೆಲ ತುಳಕೊತ ಹೋಗೋದು ತೊಂದರೆಯದಾಗಿತ್ತು. ಸಾಲಿ ಮುಗಿದು ಹೋಗೋದಂದರ ಹತ್ತು ಘಂಟೆಯಾಗಿರತಿತ್ತು. ಮನಿ ಮುಟ್ಟಿದಾಗ ಮಧ್ಯಾನ್ಹ ಆಗಿರತಿತ್ತು. ಮನಿಗೆ ಹೋದ ಕೂಡಲೆ ತಾಯಿ ಮಾಡಿದ ಅಡಿಗೆ ತಿನತಿದ್ದೆ. ಅಡ್ಡಾಗಿ ಏಳೋದರೊಳಗ ಸಂಜೆ! ರಾತ್ರಿ-ಅಂತೂ ನಿದ್ದಿ. ಆದಿತ್ಯವಾರ ಪೂರಾ ಗಡಿಬಿಡ್ಯಾಗ ಹೋಗತಿತ್ತು. "ಅವ್ವ, ನಸುಕಿನ್ಯಾಗ ಹೋಗೋವ ಅದ ರೊಟ್ಟಿಲಗು ಆಗಿರಲಿ." ಅಂತ ತಾಯಿಗೆ ಹೇಳಿ ಮಲಗತಿದ್ದೆ ಆಕೆ ಬೇಗ ಎದ್ದು ರೊಟ್ಟಿಮಾಡಿ ತಯಾರ ಇಡತಿದ್ದಳು. ಬೆಳ್ಳಿ ಚಿಕ್ಕಿ ಮೂಡೊದರೊಳಗ ನಾ ಮನಿ ಬಿಡತಿದ್ದೆ. ರೊಟ್ಟಿಗಂಟು ಹೆಗಲಮ್ಯಾಲೆ ಇಟಗೊಂಡು ಬನಗರವಾಡಿ ದಾರಿಮ್ಯಾಲೆ ಇರತಿದ್ದೆ. ಪ್ರತಿ ಶನಿವಾರ ಆದಿತ್ಯವಾರ ಹೀಂಗ ಹೋಗೋದ ರೊಳಗ ಏನು ಸುಖ ಇರಲಿಲ್ಲ. ಆದರೂ ಮನಿ ಎಳೆತ-ಒಂದು ಬೇರೆಯೇ ಆದ ವಸ್ತು. ಅದಕ್ಕ ಹೋಗಬೇಕು ಅಂತನಿಸುತಿತ್ತು.

ನನ್ನ ಓಡಾಟ ನೋಡಿ ಆಯುಬೂ ಕನಿಕರಪಟ್ಟು ಅನತಿದ್ದ,

"ಮಾಸ್ತರ, ಮನೀ ಮಾಡಲ್ಲ ಇನ್ನ!"

"ಅದ್ಯಾಕಪ್ಪಾ?"

"ಊಟದ ಕಾಟಕ್ಕ. ಮದುವೆ ಮಾಡಿ ಮನೀ ಮಾಡು."

ಮದುವಿ ಮಾಡಿ ಮನಿ ಮಾಡೋದು ಯಾತಕ್ಕ? ಹೊಟ್ಟಿಗಾಗಿ. ಇದಕ್ಕಿಂತ ಹೆಚ್ಚಿನ ಅರ್ಥ ಮದುವೆ ವಿಷಯದಲ್ಲಿ ಆಯುಬೂಗ ಇರಲಿಲ್ಲ. ಅವ ಅನ್ನೋದು ನಿಜ. ತನಗನಿಸಿದ್ದನ್ನ ಅವ ಹೇಳಿದ. ಅಡಗಿ ಮಾಡೋದಂದರ ಗಂಡಸರಿಗೆ ಬೇಸರ! ಆದರ ಬರೀ ಹೊಟ್ಟಿ ವ್ಯವಸ್ಥಾದರಂದ ಮದುವಿ ಮಾಡೋ ಮಾತು ನನ್ನ ಮನಸ್ಸಿಗೆ ಬರಲಿಲ್ಲ. ಅಂಥ ವಿಚಾರದ ಸುಳಿವೂ ನನ್ನಲ್ಲಿರಲಿಲ್ಲ. ಅತಿ ಬೇಸರ ಆದರ ಶನಿವಾರ ಮನಿಗೆ ಹೋಗೋದು ಬಿಡತಿದ್ದೆ. ಅಲ್ಲಿ ಹೋಗಿ ಬೇಸರ ಅನಿಸಿದರ ಸೋಮವಾರ ಬರೋದು ಬಿಟ್ಟು ಮಂಗಳವಾರ ತಿರುಗಿ ಬರತಿದ್ದೆ. ಇಲ್ಲಿದರ ಓಡಾಟ ನಡದ ಇತ್ತು.

ಈ ಸಲ ಸ್ವಲ್ಪ ತಡಾಮಾಡಿ ಊರಿಂದ ಹೊರಟೆ. ಹೋಗೋದರಾಗ ಸಂಜೆ ಯಾಗಿತ್ತು. ನಾನು ರಾಮುನ ರೂಪಾಯಿ ಮುರಿಸಿದ್ದೆ. ಅದನ್ನೆಲ್ಲ ರೊಟ್ಟಿ ಗಂಟನ್ಯಾಗ ಕಟ್ಟಿದ್ದೆ. ದಾರಿಗುಂಟ ಅದೊಂದು ದೊಡ್ಡ ದೊಡ್ಡ ಭಾರ ಅನಿಸತಾ ಇತ್ತು. ಆ

ಚೀಲ ಎದಿ ಹತ್ತರ ಹಿಡಿದು ನಡಿಯುತಿದ್ದೆ. ಯಾರಾರ ಬಂದು ಹೊಡೆದ ಕಸಗೊಂಡರ, ಎಂದು ಮನಸಿನಲ್ಲಿ ಬಂದು ಬಲುವೇಗದಿಂದ ನಡದೆ. ಊರಾಗ ಬಂದ ಕೂಡಲೆ ಭಾರ ಇಳಿದ್ಹಾಂಗ ಆತು. ಕೋಣೆ ಬಾಗಿಲ ತೆಗೆದು, ಚಿಮಣಿ ಹಚ್ಚಿ ಕೈಕಾಲ ತೊಳಕೊಂಡು ಹಾಸಿಗ್ಗೆ ಆತುಕೂತೆ. ಕಾಲು ಚಾಚಿದ್ದೆ. ಬಹಳ ನಡದ ಬಂದವ್ಯಾಲೆ ಕಾಲು ಚಾಚಿ ಕೂಡೋದರೊಳಗ ಇರೋ ಸುಖ, ಅನುಭವಿಸಿದವಗ ಗೊತ್ತು. !

ಮಳೆಯಿಂದ ಗೋಡೆಗಳಿಗೆ ತೇವ ಏರಿತ್ತು. ನಾಲ್ಕಾರು ದಿನ ಬರೀ ಮೋಡ ಇದ್ದು ಗಾಳಿ ಇದ್ದಿಲ್ಲ. ಕೋಣೆ ನಾರತಿತ್ತು. ಮೂಲ್ಯಾಗೆಲ್ಲ ಗುಂಗಾಡು. ಅವು ಎದ್ದು ಹಾರಾಡಿ ತಮ್ಮ 'ಹಾಡ' ಕೇಳಸತಾ ಇದ್ದವು. ಆ ಹಾಡ ಕೇಳಿ ಕೇಳಿ ಬೇಸತ್ತೆ. ನಾನು ದಣಿದು ಮಲಕೊಬೇಕು ಅಂತ ಮಾಡಿದ್ದೆ. ಆದರ ದೀಪ ಹಚ್ಚೊ ವ್ಯಾಳ್ಯಾಕ ನಿದ್ದೀ ಮಾಡಬಾರದಂತ. ಅದು ಲಕ್ಷ್ಮೀ ಮನಿಗೆ ಬರೋ ವ್ಯಾಳ್ಯಾ. ಆಗ ಮಲಗೋದು ದುರ್ಭಾಗ್ಯದ ಲಕ್ಷಣ. ಭಾಗ್ಯವಂತನಾದರಾರ ಏನಾಗೋದಿತ್ತು? ದೇಹ ದಣಿದಾಗ ಭಾಗ್ಯವಂತನಾದರೇನು, ದುರ್ಭಾಗಿ ಆದರೇನು? ಇಬ್ಬರೂ ಒಂದ. ದಣಿದಾಗ ವಿಶ್ರಾಂತಿ ಬೇಕು. ವಿಶ್ರಾಂತಿ ಪಡೆಯಬೇಕಂದರ ನಿದ್ದಿ ಕಟ್ಟಿಟ್ಟ್ಹಾಂಗ. ಇದು ಯೋಗ್ಯವಲ್ಲ, ನೆಟ್ಟಗೂ ಅಲ್ಲ. !

ಸಾವಕಾರ ಕೂತಿದ್ದೆ. ಹಾಂಗ ಅಡ್ಡಾದೆ. ಮೈ ಸಡಿಲುಮಾಡಿ ಬಿದ್ದೆ. ಕಣ್ಣು ಮುಚ್ಚಿದವು. ಮುಚ್ಚಿದ ಕಣ್ಣಿನೆದುರು ಬಣ್ಣ ಬಣ್ಣದ ತೆರೆಗಳು ಕಾಣಹತ್ತಿದವು – ಜಾಂಬಳಿ-ನೀಲಿ-ಹಳದಿ-ಕಪ್ಪು. ಈ ತೆರೆಗಳು ಏಕೆ ಕಾಣುತ್ತವೆ? ಹುಡುಗರು ಈ ಪ್ರಶ್ನೆ ಸಾಲ್ಯಾಗ ಕೇಳಿದರ ಮಾಸ್ತರ ನಗಿಗೀಡಾಗುವನು. ಇದರ ಉತ್ತರ ಕಠಿಣವಿರಲಿಕ್ಕಿಲ್ಲ. ಆದರೆ ನನಗೆ ಗೊತ್ತಿಲ್ಲ. ಫಾಯನಲ ಪಾಸಾದ ನನ್ನಂಥ ಹುಡಂಗ ಮಾಸ್ತರಗ ಅದ್ಹ್ಯಾಂಗ ತಿಳಿಯಬೇಕು? ಇಂಥ ಪ್ರಶ್ನೆ ಹುಡುಗರು ಕೇಳಿದರ ನನ್ನ ಫಜೀತಿ ದೇವರೇ ಬಲ್ಲ. ಬನಗರವಾಡಿ ಹುಡುಗರೇನು ಇಂಥ ಪ್ರಶ್ನೆ ಕೇಳೊವಷ್ಟು ಜಾಣರಿರಲಿಲ್ಲ. ಹೀಗಿದ್ದರು ನನಗೆ ಇದರ ಅರ್ಥವಾಗಬೇಕು. ಕಣ್ಣಿನ ರಚನೆ ಹೇಗಿದೆ? ಆರೋಗ್ಯ ಶಾಸ್ತ್ರದಲ್ಲಿ ಇದೆಲ್ಲ ಅದೆ......ಆಗ ಓದಿದ್ದೂ ಇತ್ತು. ಕಣ್ಣು ಜಡವಾಗಿ ಮುಚ್ಚಿದವು. ಮುಚ್ಚಿದ ಕಣ್ಣು ತೆರೆಯಲೇ ಇಲ್ಲ. ನಾಲ್ಕಾರು ತಾಸಿನ ಮ್ಯಾಲೆ ನಾ ಎಚ್ಚರಾದೆ. ಆಗ ಜಿಟಿ ಜಿಟಿ ಮಳಿ ಬೀಳತ್ತಿತ್ತು. ಕೋಣ್ಯಾಗ ದೀಪ ಇದ್ದಿಲ್ಲ. ತೆರೆದಿಟ್ಟ ಬಾಗಿಲ ದಾಗಿಂದ ತಂಗಾಳಿ ಬೀಸತಿತ್ತು. ನಾ ಎದ್ದೆ ಮತ್ತು ಒಮ್ಮೆಲೆ ನೆನಪಾಯಿತು. ತಲೆದಿಂಬಿನ ಹತ್ತರವಿದ್ದ ಚೀಲ ಹಿಡಿದು ನೋಡಿದೆ. ಚೀಲ ಕೈಗೆ ಹತ್ತಿತು. ಆದರ ಅದರಾಗ ರೂಪಾಯಿ ಗಂಟು ಇದ್ದಿಲ್ಲ. ಎದಿ 'ಧಸಲ್ಲ' ಅಂತು. ಕತ್ತಲಾಗ ಇನ್ನೊಮ್ಮೆ ಚೀಲ ತೆಗೆದು ನೋಡಿದೆ. ಧೋತರ ಶರ್ಟ ಹೊರಗೆ ತೆಗೆದೆ. ಇದ್ದೆದ್ದೆಲ್ಲ ಹೊರಗೆ ತಗದೆ. ರೂಪಾಯಿ ಎಲ್ಲಿಯೂ ಕೈಗೆ ಹತ್ತಲಿಲ್ಲ. ಕಡ್ಡಿಕೊರೆದು ಚಿಮಣಿ ಹಚ್ಚಿದೆ.

ಹುಚ್ಚ ಹಿಡಿದವರ್ಹಾಂಗ ಹಾಸಿಗೆ, ಚೀಲ, ನೆಲ ಎಲ್ಲಾನೂ ಹಿಡಿದ್ಹಿಡಿದು ನೋಡ ಹತ್ತಿದೆ.

ರೂಪಾಯಿ ಕಳಕೊಂಡು ನಾಲ್ಕು ದಿನಗಳಾದವು. ನನ್ನ ದಿನದ ಕೆಲಸ ನಡದ ಇತ್ತು. ಊಟಾ ಮಾಡತಿದ್ದೆ, ಸಾಲಿಗೆ ಹೋಗತಿದ್ದೆ. ರಾತ್ರಿ ಚಾವಡಿ ಮುಂದ ಕೂಡಿದ ಜನರ ಸಭೆಗೂ ಹೋಗತಿದ್ದೆ. ರೂಪಾಯಿ ಹ್ಯಾಂಗ ಹೋದವು, ಎಲ್ಲಿ ಹೋದವು ಇದರ ಲೆಖ್ಖ ಹತ್ತ ವಲ್ಲದು. ವಿಚಾರ ಮಾಡಿದ್ಹಾಂಗ, ಬಲ್ಯಾಗ ಸಿಕ್ಕ ಇಲಿ ಹಾಂಗ 'ವಿಲಿವಿಲಿ' ಒದ್ಯಾಡತಿದ್ದೆ. ರೂಪ ಯಿ ಮನ್ಯಾಗ ಬಿಟ್ಟನೇನು, ಹಾದ್ಯಾಗ ಆರಾಮು ಮಾಡಲಿಕ್ಕೆ ಕೂತಾಗ ಬಿದ್ದವೇನು ಹೀಗೆ ಸಂಶಯ ಬರಹತ್ತಿದವು. ರೂಪಾಯಿ ಸುರಕ್ಷಿತವಾಗಿರಬೇಕೆಂದು ನಾನು ಅದನ್ನು ರೊಟ್ಟಿ ಗಂಟಿನಲ್ಲಿ ಕಟ್ಟಿದ್ದೆ. ಯಾರಾರ ಕಸಗೊಳ್ಳಲಿಕ್ಕೆ ಬಂದರ, ನನ್ನ ಹತ್ತರ ರೊಟ್ಟಿ ಗಂಟಿನ ಹೊರ್ತು ಮತ್ತೇನಿಲ್ಲ ಅಂತ ಸುಳ್ಳ ಹೇಳಲಿಕ್ಕೆ ಬರಬೇಕಂತ......

ಈಗ ರೊಟ್ಟಿನೂ ಹೋಗಿದ್ದವು, ರೂಪಾಯಿನೂ ಹೋಗಿದ್ದವು. ರೊಟ್ಟಿ ವಾಸನೆಗೆ ಬಂದು ನಾಯಿ ಏನಾರ ಆ ಗಂಟ ಒಯ್ತೇನು ? ಇದೇನು ಹುಚನ್ಹಾಂಗ ಕಾಣೊ ಆಯಬೂಸ ಕೆಲಸವೇನು ? ಅವನ ಮಾರಿ ನೋಡಿದರ ಹಾಂಗ ಅನಿಸತಿದ್ದಿಲ್ಲ. ಅವನ ನಡಾವಳಿಯಲ್ಲಿ ಕೊಂಚವಾದರೂ ಸಂಕೋಚ ತೋರತಿದ್ದಿಲ್ಲ. ಹಾಂಗಾರ ಮನಿ ಹೊಕ್ಕು ಯಾರಾರ ಹೊತ್ತರೇನು ? ಇಡೀ ದಿವಸ ಇದ ವಿಚಾರನ, ವಿಚಾರ ಮನಸಿನ್ಯಾಗ ಸುಳಿಯುತಿತ್ತು, ವಿಶ್ವಾಸದಿಂದ ರಾಮು ಕೊಟ್ಟ ರೂಪಾಯಿ, ನನ್ನ ನಿಷ್ಕಾಳಜಿ ತನತಿಂದ ಕಳಕೊಂಡಿದ್ದೆ. ನಾನೇನು ಅವನ ರೊಕ್ಕ ತಿಂದಿದ್ದಿಲ್ಲ. ಅಂಥ ವಿಚಾರನೂ ನನ್ನ ಮನಸಿನ್ಯಾಗ ಎಂದೂ ಬಂದಿದ್ದಿಲ್ಲ. ಆದರೆ ಹೀಂಗ ಹೇಳಿದರ ರಾಮು ನಂಬಬಹುದೇ ? ಅವನಾರ ಯಾಕ ನಂಬಬೇಕು ? ನಾ ಹೋಗಿ ರೂಪಾಯಿ ಕಳವಾಗ್ಯಾವ ಅಂತ ಹೇಳಿದರ, ಈ ಮನಷ್ಯಾ ಹತ್ತಿಪ್ಪತ್ತು ರೂಪಾಯಿ ಕೊಟ್ಟಾಗ ತಿರುಗಿಕೊಟ್ಟು ಒಳೆ ಸಾಚಾ ಎಂದು ತೋರಿಸಿ, ಹೆಚ್ಚು ರೂಪಾಯಿ ಕೊಟ್ಟ ಕೂಡಲೆ ಕೈ ತೋರಿಸಿದ. ತನ್ನ ಜಾತಿಮ್ಯಾಲೆ ಹೋದ. ನಮ್ಮ ಅಡಚಣಿ ನೋಡಿ ತನ್ನ ಮನಿ ತುಂಬಿದ ! ರಾಮಾ ಬನಗರ ಹೀಂಗ ಅಂದರ ಅದರೊಳಗ ಅವನ ತಪ್ಪೇನು ? ಅದು ಸಹಜವಾದ ಮಾತು. ನಾಲ್ಕು ಜನರ ಕಡೆಯಿಂದ ಸೈ ಅನಿಸಿಕೊಬೇಕು ಅಂತ ಹೊರಟ ನನಗೆ ಸಿಡಿಲು ಬಡದಂತಾಯಿತು ! ಈ ವಿಚಾರಗಳು ಬಂದು ಮನಸು ಅಸ್ವಸ್ಥಗೊಳ್ಳುತ್ತಿತ್ತು. ಎಲ್ಲ ಬುದ್ಧಿ ಬಂದು ಈ ರೂಪಾಯಿ ತಗೊಂಡೆ, ಈ ಭಾರ ಹೊತ್ತೆ ? ಸಾಧ್ಯವಾಗಿದ್ದರ ನಾ ಈ ರಕಮು ಕೊಡಬಹುದಾಗಿತ್ತು. ಮತ್ತು ಕಳವಾದ ಮಾತನ್ನು ರಾಮುಗ ಹೇಳುತ್ತಿರಲಿಲ್ಲ. ಆದರ ನನ್ನ ಹತ್ತರ ಹಣ ಇದ್ದಿಲ್ಲ. ನಮ್ಮ ಮನ್ಯಾಗೂ ಇದ್ದಿಲ್ಲ. ನನಗ ಸಾಲಾ ಕೊಡವರೂ ಯಾರೂ ಇದ್ದಿಲ್ಲ, ವಿಚಾರ ಮಾಡಿ ಮಾಡಿ ನಾ ನಿರಾಶನಾದೆ. ರೊಕ್ಕ ಹ್ಯಾಂಗ

ಹೋತು, ಯಾರ ತಗೊಂಡಿರಬೇಕು ಇದ ವಿಚಾರನ ವಿಚಾರ! ದಾದೂ ಏನಾರ ಹೊಂಚ ಹಾಕಿ ಮಾಡಶ್ಯಾನ ಏನು ಎಂಬ ವಿಚಾರ ಹೊಳೆದಾಗ, ಎದಿ ಒಡದ್ಹಾಂಗ ಆತು! ಮಾಸ್ತರ ಹೆಸರು ಕೆಡಿಸಿ, ಅವನ್ನ ಮಾನಗೇಡಿ ಮಾಡಬೇಕು ಅಂತ ಹೊಂಚು ಹಾಕಿದನೋ ಏನೋ? ಆದರ ಇಷ್ಟು ದಿನ ಅವ ಯಾಕ ಸುಮ್ಮನಿರಬೇಕು, ಅದು ತಿಳಿಯುವಲ್ಲದು. ಊರಿಂದ ಬಂದಮ್ಯಾಲೆ ರಾಮ ನನಗ ಭೆಟ್ಟಿಯಾಗಿದ್ದಿಲ್ಲವೆಂತಲ್ಲ. ಅವ ಸಾಲಿಗ ಬರತಿದ್ದ ಆದರ ರೊಕ್ಕದ ಮಾತ ಎತ್ತಿದ್ದಿಲ್ಲ. ಮಾಸ್ತರ ಹತ್ತರ ರೂಪಾಯಿ ಇದ್ದರ, ತನ್ನ ಹತ್ತರ ಇದ್ದಾಂಗ ಅಂತ ತಿಳಿದಿರಬೇಕು. ಮಾಸ್ತರ ಇನ್ನೂ ಮುರಿದಿರಲಿಕ್ಕಿಲ್ಲ, ಮುರಿದ ಕೂಡಲೆ ಮನಿಗೆ ತಂದ ಕೊಡತಾನ. ನಾನಾಗಿ ಯಾಕ ಕೇಳಲಿ, ಮತ್ತ ಅವನ ಮ್ಯಾಲೆ ಯಾಕ ಸಂಶಯ ತೋರಿಸಲಿ? – ಹೀಂಗ ವಿಚಾರಮಾಡಿ ರಾಮು ಕೇಳಿರಲಿಕ್ಕಿಲ್ಲ. ನನಗ ಮಾತ್ರ ಕಳ್ಳನ್ಹಾಂಗ ಅನಿಸತಿತ್ತು; ರಾಮುನ್ನ ತಪ್ಪಿಸಬೇಕು, ಅವನ ಕೂಡ ಮಾತೂ ತಪ್ಪಿಸಬೇಕು, ಈ ಊರ ಬಿಟ್ಟು ಹೋಗಬೇಕು, ಅವರ್ಯಾರೂ ನನಗ ಭೆಟ್ಟಿನ ಆಗಿರ ಬಾರದು ಎಂದನಿಸುತ್ತಿತ್ತು. ನನ್ನಮ್ಯಾಲೇ ನಾ ಸಿಟ್ಟಾಗಿದ್ದೆ.

ಒಂದು ದಿವಸ ಕಾರಭಾರಿ ಕಪ್ಪನ್ನ ಹುಡುಗಿ – ಮೊಮ್ಮಗಳು ಸೀರಿ ಫಡಫಡಿಸಿ ಕೊತ ಬಂದಳು. ಕೊಣ್ಯಾಗ ನಾ ಒಬ್ಬನ ಇದ್ದೆ. ಎರಡು ಮೂರು ಸಾರೆ ಬಾಗಿಲೊಳ ಗಿಂದ ಹಣಕಿ ಹಾಕಿದಳು. ಮಾರಿಮ್ಯಾಲೆ ಸೆರಗು ಮುಚಿಕೊಂಡು ನಿಂತಳು. ನಾ ಕೇಳಿದೆ,

"ಯಾರವರು?"

"ನಾ, ಅಂಜೀ"

"ಕಾರಭಾರಿ ಅಂಜಿ ಏನು?"

"ಹೂನರಿ"

"ಒಳಗ ಬಾ. ಏನ ಕೆಲಸ ಅದ?"

ನಾಚಿಕೊತ ಒಳಗ ಬಂದಳು. ಕೆಂಪಾದ ಕೈಮಗ್ಗದ ಸಿರೀ ಉಟ್ಟಿದ್ದಳು. ಮ್ಯಾಲೆ ಹಸಿರು ಒಣ್ಣದ ಕುಬಸ ತೊಟ್ಟಿದ್ದಳು. ಊರಾಗ, ಕಾರಭಾರಿ ಮನ್ಯಾಗ ಆಕೆನ್ನ ಅನೇಕ ಸಾರೆ ನಾ ನೋಡಿದ್ದೆ. ಆದರ ಲಕ್ಷ ಸೆಳೆಯುವಷ್ಟು ವಯಸ್ಸಿನ್ಯಾಗ ಬಂದಾಳೆಂದನಿಸಿದ್ದಿಲ್ಲ. ಅದರ ಅರಿವೂ ನನಗಿದ್ದಿಲ್ಲ. ಹದಿನಾಕ ತುಂಬಿ ಹದಿನೈದರಾಗ ಇದ್ದಳು. ಆದರ ಆಕೆ ಮೈಕಟ್ಟು ಇಪ್ಪತ್ತರ್ಹಾಂಗ ಕಾಣತಿತ್ತು.

ಸೆರಗು ಸಾವರಿಸಿದ್ಹಾಂಗ ಮಾಡಿ, ಮುರಕಾ ಹೊಡೆದು ಆಕೆ ಅಂದಳು,

"ತಾಲೂಕಿಗೆ ಯಾವಾಗ ಹೋಗತಿದೀ?"

ವಾರ ಮುಗಿಲಿಕ್ಕೆ ಬಂದಿತ್ತು. ನಾಳೆ ಶನಿವಾರ. ಉಳಿದ ಯಾವ ಕೆಲಸಕ್ಕ ಹೋಗದಿದ್ದರೂ ರಾಮುನ ರೊಕ್ಕದ ಕೆಲಸಕ್ಕಾದರೂ ಹೋಗಬೇಕಾಗಿತ್ತು.

"ನಾಳೆ ಮುಂಜಾನೆ. ಯಾಕ?"

"ನನ್ನದೊಂದು ಕೆಲಸ ಮಾಡತಿ ?"

ಶನಿವಾರ ಅನೇಕರು ಅನೇಕ ಕೆಲಸ ಹೇಳತಿದ್ದರು. ಯಾರದಾರ ಔಷಧ, ಯಾರದಾರ ನೋಟು ಮುರಿಸೋದು, ಯಾರದಾರ ಮನಿಆರ್ಡರ ಮಾಡೋದು, ಯಾರದಾರ ಪತ್ರ ಹಾಕೋದು, ಯಾರದಾರ ಪತ್ರ ಬರಿಯೋದು ಹೀಗೆ ಕೆಲಸವಿರತಿದ್ದವು.

"ಮಾಡೊಹಾಂಗ ಇದ್ದರ ಮಾಡತೇನಿ. ಹೇಳಲ್ಲ"

ಅಂಜೀ ಅಂದಳು, "ನನ್ನ ಕುಬಸ ಹೊಲಿಸಿಕೊಂಡು ಬರ್ರಿ !"

ನಾನು ಗೊಂದಲದಾಗ ಬಿದ್ದೆ. ಅಳತಿಗೆ ಒಂದ ಕುಬಸ ಕೊಟ್ಟಳು.

ಒಂದು ಚಲೋ ಖಣ ನನ್ನ ಎದುರಿಗೆ ಒಗೆದು ಅಂದಳು,

"ನಾ ಇದೆಲ್ಲ ಕದ್ದು ಮಾಡತೇನಿ. ಮುದಕಗ ಹೇಳಬ್ಯಾಡ. ಕೂಲಿ ಮಾಡಿ ದುಡ್ಡು ಮಾಡಿ ಖಣ ತಗೊಂಡೇನಿ. ಎರಡು ತಿಂಗಳಾದರೂ ಕುಬಸ ಹೊಲಿಸೊದು ಆಗಿಲ್ಲ. ಹೊಲಿಸಿ ತಗೊಂಡು ಬಾ, ಹೊಲಿಗೆ ದುಡ್ಡು ನಾ ಕೊಡತೇನಿ."

ನಾ ಏನಾರ ಹೇಳೋದರೊಳಗ ಆಕೆ ಹಳೆ ಕುಬುಸ, ಹೊಸ ಖಣಾ ಒಗೆದು ಹೋಗೇ ಬಿಟ್ಟಳು.

ಶನಿವಾರ ಮಧ್ಯಾನ್ಹ ಮನೆ ಮುಟ್ಟಿದೆ. ಸಮಯ ಸಾಧಿಸಿ ಕಳಕೊಂಡ ಹಣದ ಮಾತನ್ನು ತಂದೆಯವರಿಗೆ ಹೇಳಿದೆ. ಅವರು ನನ್ನ ಮಾತನ್ನು ಶಾಂತಚಿತ್ತರಾಗಿ ಕೇಳಿದರು. "ನೀನು ಈ ಜವಾಬದಾರಿ ಹೊತ್ತದ್ದು ತಪ್ಪು" ಎಂದು ಹೇಳಿದರು.

"ನನಗೆ ಅವನ ವಿಶ್ವಾಸವನ್ನು ಗಳಿಸುವದಿತ್ತು. ಅಂತ ಈ ಹೊಣೆ ಹೊತ್ತೆ." ನನ್ನನ್ನು ಸಮರ್ಥಿಸುತ್ತ ನಾನು ಹೇಳಿದೆ.

"ಒಂದು ವೇಳೆ ಈ ಹಣ ಕಳಕೊಂಡರ, ತುಂಬಿಕೊಡುವ ಸಾಮರ್ಥ್ಯ 'ನನ್ನಲ್ಲಿ ಅದ ಏನು' ಎಂಬ ವಿಚಾರ ನೀನು ಮಾಡಬೇಕಾಗಿತ್ತು. ಇಂಥ ಸಾಮರ್ಥ್ಯವು ನನ್ನಲ್ಲಿಯೂ ಇಲ್ಲ, ನಿನ್ನಲ್ಲಿಯೂ ಇಲ್ಲ. ಹಣ ತಿರುಗಿ ಕೊಡುವದು ಸಾಧ್ಯವಿಲ್ಲದ್ದರಿಂದ, ಗಳಿಸಿದ ವಿಶ್ವಾಸವು ಹಾಳಾಗಿ ಹೋಗುವದು."

"ಹೌದು, ಈಗಂತೂ ನನ್ನಿಂದ ತಪ್ಪಾಗಿದೆ. ಅದಕ್ಕ ನಿಮ್ಮ ಸಲಹೆ ಕೇಳತಾ ಇದ್ದೇನೆ."

ನಮ್ಮ ತಂದೆ ಸ್ವಲ್ಪ ಹೊತ್ತು ಸುಮ್ಮನಿದ್ದರು. ಕೆಲಸಕ್ಕೆ ಬಾರದ ಇಂಥ ಉದ್ಯೋಗ ಮಾಡಿದರೆ, ಅವರ ಮನಸ್ಸಿಗೆ ಬರತಿದ್ದಿಲ್ಲ. ತಮ್ಮ ತಮ್ಮ ಕೆಲಸ ತಾವ ಮಾಡಬೇಕು, ಹಣದಂಥ ಹೊಣೆಗಾರಿಕೆಯ ಮಾತನ್ನು ಹೊರಬಾರದು; ಮನಸು ಕೆಡಸೊದು ದುಡ್ಡು ಎಂದು ಅವರು ಯಾವಾಗಲೂ ಹೇಳತಾ ಇದ್ದರು. ಆದ್ದರಿಂದ ನನ್ನ ಮೈಮೇಲೆ ಬಂದ ಪ್ರಸಂಗ ಹೇಳಿದೊಡನೆ ಅವರು ನಿಷ್ಠುರ ಮಾತನ್ನಾಡಿದರು. "ನೀ ಮಾಡೀದಿ ನೀನ ಅದನ್ನು ಮುಗಿಸು" ಎಂದು ಈ ಹುಡುಗನಿಗೆ ಹೇಳಬಾರದೆಂದು ಅವರಿಗೆ ಅನಿಸಿರಬೇಕು.

ಅವರಂದರು, "ಯಾರ ಹಣ ಕಳದದ, ಅವಗ ಈ ಮಾತನ್ನು ತಿಳಿಸು. ನಿಮ್ಮೂರಾಗ ಹೋಗ್ಯದ, ಅದಕ್ಕ ಎಲ್ಲಾರೂ ಕೂಡೇ ಹುಡುಕೊಣ. ಅವ ಇದಕ್ಕೂ ತಕ್ರಾರ ಮಾಡಿದರ, 'ನಾ ಭಿಫಂಗ ಅಲ್ಲ, ಹೊಲಮನಿ ಇದ್ದಾವ ಇದ್ದೇನಿ, ಸರಕಾರಿ ನವಕರ ಇದ್ದೇನಿ' ನಿನ್ನ ಹಣ ತಿರುಗಿ ಕೊಡತೇನಿ." ಅಂತ ಹೇಳು.

ಅವರ ಮಾತು ಯೋಗ್ಯವಿದ್ದವು. ನನ್ನ ಅಭಿಪ್ರಾಯವೂ ಹಾಗೆ ಇತ್ತು. ಆದರೆ ಹೀಗೆ ಹೇಳುವುದು ನನ್ನಿಂದ ಆದೀತೆಂದು ಅನಿಸುವಲ್ಲದು. ರಾಮು ಈ ಮಾತನ್ನು ನಂಬುವದು ಸಾಧ್ಯವಿರಲಿಲ್ಲ. ಊರವರೂ ನಂಬತಿರಲಿಲ್ಲ. ಪೋಲೀಸರಿಗೆ ತಿಳಿಸಿದರೆ ಯಾವ ಪ್ರಯೋಜನವಾಗಲಿಕ್ಕಿಲ್ಲ ಎಂದು ಅನಿಸುತ್ತಿತ್ತು. ಮತ್ತ ಪೋಲೀಸರು ಬಂದು ಊರಾಗ ಧಾಂದ್ಲೆ ಹಾಕಾವರು, ಯಾರನ್ನಾರ ಹಿಡಿಯವರು, ಬಡಿಯವರು. ಇದರಿಂದ

ಊರಿನವರಿಗೆ ಸುಳ್ಳ ತೋರಿದರೆ. ಅದಕ್ಕಿಂತ ಹಣ ಕಳದದ ಹೇಳಿ ತುಂಬಿ ಕೊಡೋದ ನೆಟ್ಟಗ. ತುಂಬಿಕೊಟ್ಟು ಸುಮ್ಮನಿರೋದು ಒಳಿತು; ಈ ವಿಚಾರ ಪಕ್ಕಾಮಾಡಿದೆ. ಆ ಮ್ಯಾಲೆ ಯಾರು ನನಗ ಹಣ ಕೊಡಬಹುದು ಎಂದು ಲೆಖ್ಖ ಹಾಕಿದೆ. ಮೂರ ನಾಲ್ಕ ಸ್ನೇಹಿತರಲ್ಲೆ ಹೋದೆ, ಒಬ್ಬ ಸಾವಕಾರನ ಕಡೇನೂ ಹೋದೆ. ಆದರ ನನ್ನಂಥ ಹುಡುಗ್ಗ ಸಾಲಾ ಕೊಡಾವರು ಯಾರು ? ನಿಮ್ಮ ಅಪ್ಪನ ಜಾಮೀನು ಕೊಡು ಎಂದು ಕೆಲವರು ಅಂದರು. ಉಳಿದವರು ನಿಷ್ಠುರವಾಗಿ ಕೊಡೋದಿಲ್ಲ ಅಂತ ಹೇಳಿದರು. ನನಗೂ ಅಡ್ಡಾಡಿ ಸಾಕಾಗಿತ್ತು, ಮುಖ ಬಾಡಿತು. ಆದಿತ್ಯವಾರ ರಾತ್ರಿ ಊಟ ಮಾಡದೆ ಅಡ್ಡಾದೆ. ನಿದ್ದಿ ಬರಲಿಲ್ಲ. ನನಗಾಗುವ ತಳಮಳವನ್ನರಿತು, ನನ್ನ ತಾಯಿ ಕತ್ತಲದಾಗ ನನ್ನ ಹತ್ತರ ಬಂದು ಅಂದಳು,

"ರಾಜಾರಾಮು, ಇನ್ನೂ ಮಲಗಿಲ್ಲ ಏನು ?"

ನಾನು, "ಹೂಂ" ಅಂದೆ.

ತಾಯಿ ತನ್ನ ಹುರಬರಕಾದ ಅಂಗೈ ನನ್ನ ಬೆನ್ನಮ್ಯಾಲೆ ಆಡಿಸಿ ಅಂದಳು,

"ಕಳದ ಹಣ ಸಿಗತದೇನು ನೋಡು. ಕುರುಬ ಬಹಳ ತ್ರಾಸ ಕೊಡಲಿಕ್ಕೆ ಹತ್ತಿದರ, ನಿನ್ನ ಅಜ್ಜಪ್ಪನ ಊರಾಗ ಇದ್ದ ನನ್ನ ಮನಿ ಮಾರು. ಐದಾರು ನೂರು ರೂಪಾಯಿ ಬರಬಹುದು. ಅವನ್ನ ತಗೊಂಡ ಅವನ ಹಣ ಕೊಟ್ಟು ಪಾರಾಗು. ಇದಕ್ಯಾಕ ಇಷ್ಟ ಚಿಂತಿ?"

ತಾಯಿ ಮಾತು ಕೇಳಿ ನನಗ ಧೈರ್ಯ ಬಂತು. ನನ್ನ ಬೆನ್ನ ತಟ್ಟಾವರೂ ಇದ್ದಾರ. ಅವಶ್ಯ ಬಿದ್ದರ ರಾಮುನ ಹಣ ತುಂಬಿಕೊಡುವ ಹಾದಿ ತೋರಿತು. ಆದ ಮಾತನ್ನೆಲ್ಲ ವಾಡಿ ಜನರಿದಿರು ರಾತ್ರಿ ಸಭೆಯಲ್ಲಿ ಇಡಬೇಕೆಂದು ನಿರ್ಧರಿಸಿದೆ. ಆದರ ! ಎರಡು ಮಾತು ಮನಸನ್ಯಾಗ ಕಟಿಯುತ್ತಿದ್ದವು. ಒಂದು ತಾಯಿಮನೆ ಮಾರೋದು ಬಂತಲ್ಲ. ಇನ್ನೊಂದ ರಾಮುಗ ಹಣ ಕಳದ ಅಂತ ಹೇಳೋದು ಬ್ಯಾಡಾಗಿತ್ತು. ಇರುಕಿನಲ್ಲಿ ಸಿಕ್ಕಂತಾಯಿತು. ನಿಶ್ಚಿಂತ ಆದ್ಹಾಂಗ ತಾಯಿಗೆ ತೋರಿಸಿ ಸೋಮುವಾರ ಬೆಳಗ ಹರಿಯೊದರೊಳಗ ಬನಗರವಾಡಿಯತ್ತ ಹೊರಟೆ.

ಸೋಮುವಾರ ಸಾಲಿ ಮುಗಿಸಿ ಮನಿಗೆ ಬಂದೆ. ಅದೇ ರಾತ್ರಿ ದೈವಕ್ಕ ಹಣಕಳದ ಮಾತು ತಿಳಿಸಬೇಕೆಂದು ಮಾಡಿದೆ. ಆದರೆ ಇದನ್ನೆಲ್ಲ ಮಾಡೋದಕ್ಕಿಂತ ಮೊದಲ ಕಾರಭಾರಿ ಕಿವಿಮ್ಯಾಲೆ ಹಾಕಿ, ಅವನ ಸಲಹೆ ಪಡೆಯಬೇಕೆಂದು ವಿಚಾರಮಾಡಿ, ಅವನ್ನ ಕರಿಯಲಿಕ್ಕೆ ಆಯುಬೂಸಿಗೆ ಹೇಳಿದೆ. "ಮಾಸ್ತರದು ಜರೂರ ಕೆಲಸ ಅದ ಅವರ ಕರಿತಾರ" ಅಂತ ಕಾರಭಾರಿಗೆ ಹೇಳು. ಆಯುಬೂ ಹೋದ. ಆದ ಸಂಗತಿ ಸುಸಂಗತ ವಾಗಿ, ಮನವಟ್ಟಾಗುವಂತೆ ಕಾರಭಾರಿಗೆ ಹ್ಯಾಂಗ್ಯಾಂಗ ಹೇಳಬೇಕು ಅಂತ ಯೋಚಿಸ ಹತ್ತಿದೆ. ನನ್ನ ಮ್ಯಾಲೇನು ಈ ಪ್ರಕರಣ ಬರಲಿಕ್ಕಿಲ್ಲ ಎಂದು ನನಗನಿಸುತ್ತಿತ್ತು.

ವಿಶೇಷ ಏನೂ ಆಗದೆ ಸುಲಭವಾಗಿ ಇದರಿಂದ ಪಾರಾಗಬಹುದೆಂದು ಭಾವಿಸಿದ್ದೆ. ನಾ ಸುಮ್ಮನ ಬೆದರೇನ ಎಂದೂ ಅನಿಸಹತ್ತಿತು. ಹಣ ಕಳವಾಗಿಲ್ಲ, ಎಲ್ಲೊ ತಪ್ಪಿ ಉಳಿದಿದೆ ಅಥವಾ ಕಳಿದಿದೆ......

ಹೀಂಗೆಲ್ಲ ನನಗ ಯಾಕ ಅನಸಿತಾದ ಅನ್ನೋದು ತಿಳಿಯಲಿಲ್ಲ. ಆದರ ಹೀಂಗ ಅನಿಸತ್ತಿತ್ತೆಂಬುದು ನಿಜ. ಈ ಪ್ರಕರಣದಾಗ ನನಗ ಭಯ ಅದ ಅಂತ ಅನಿಸತಿರಲಿಲ್ಲ.

ಆಯಬೂ ಮುದಕನ ಕಡೆ ಹೋಗಿ ತಿರುಗಿಬಂದ. ಅವನ ಮಾರಿ ಮ್ಯಾಲೆ ಅಸಮಾಧಾನದ ಕಳೆ ಇತ್ತು. ಅಸಮಾಧಾನ ಅನಿಸಿದಾಗ ಆಯಬೂನ ಹುಬ್ಬು ನೀರಿಗೆ ಕಟ್ಟತಿದ್ದವು, ಗಲ್ಲ ಉಬ್ಬಿರತಿದ್ದವು ಮತ್ತು ಎರಡು ಕೈ ಎದಿಮ್ಯಾಲೆ ಮಡಿಚಿಕೊಂಡು ಅವ ನಿಲ್ಲತಿದ್ದ. ಅವ ಒಳಗ ಬ...ದರಾಗ ನಾ ಕೇಳಿದೆ,

"ಮುದಕ ಭೆಟ್ಟಿ ಆಗಲಿಲ್ಲ ಏನು?"

"ಆದನಲ್ಲ. ಭೆಟ್ಟಿ ಆಗದಿರಾಕ ಅವ ಪಂತಸರಕಾರೇನು?"

"ಹಾಂಗಾರ ಏನಂದ?"

"ಬರುದಿಲ್ಲ ಅಂದ. 'ಈಗ ಸವಡಿಲ್ಲ ಸವಾಡ ಸಿಕ್ಕಾಗ ಬರತೇನಿ' ಅಂತ ಮಾಸ್ತರಗ ಹೇಳು ಅಂದ."

ನನಗ ಸಿಡಿಲು ಬಡದ್ಹಾಂಗ ಆತು. ಒಂದುಕ್ಷಣ ತಣ್ಣಗ ಆದೆ. ಕಾರಭಾರಿ ಹೀಂಗ ಅನಬಹುದೆಂದು ಕನಸಿನಲ್ಲಿಯೂ ಅನಿಸಲಿಲ್ಲ. ಹಗಲೆಲ್ಲ 'ಮಾಸ್ತರ ಮಾಸ್ತರ' ಅಂತ ಬರಾವ, ಒಳ್ಳೆ ಸಹಾನುಭೂತಿಯಿಂದ ನಡಕೊಳ್ಳವ, ಇಂಥ ಚಲೊ ಮುದಕ ತಲೆತಿರಕ ನ್ಹಾಂಗ ಮಾತಾಡವ ಅಲ್ಲ. ನಾನು ಆಯಬೂಗ ಕೇಳಿದೆ,

"ಚ್ಯಾಷ್ಟಿಲೆ ಅಂದನೇನು?"

"ಅದರಾಗ್ಯಾಕ ಚ್ಯಾಷ್ಟಿ? ಚಲೊ ಸಿಟ್ಟಿಗೆದ್ದ ಅಂದ!" ಆಯಬೂನ ಮೂಗ ಉಬ್ಬಿತ್ತು. ಮಾಸ್ತರ ಬಾ ಅಂದರ ಒಬ್ಬ ಕುರುಬ ಹೀಂಗ ಹೇಳಿಕಳಿಸಬೇಕೇನು? ಅವನ ಹೊಟ್ಯಾಗ ಬೆಂಕಿ ಬಿದ್ದಿತ್ತು. ಅವ ನಿಂತಲ್ಲಿಂದ ಅಂದ.

"ಅವ ಯಾಕೊ ನಿಮ್ಮ ಮ್ಯಾಲೆ ಸಿಟ್ಟ ಬೆಂಕಿ ಆಗ್ಯಾನ!" ನನಗೇನು ತೋಚು ವಲ್ಲದು. ಮುದುಕ ಇಷ್ಟು ಸಿಟ್ಟಾಗಬೇಕಾದರ, ನಾ ಮಾಡಿದ ತಪ್ಪಾದರೂ ಯಾವದು?

ಟೊಪಿಗಿ ತಲಿಮ್ಯಾಲೆ ಇಟಕೊಂಡವನ ಮುದುಕನ ಮನಿಕಡೆಗೆ ಹೊರಟೆ.

ಮನ್ಯಾಗ ಒಲಿ ಹತ್ತರಿದ್ದ ಹಣತಿ ಬೆಳಕು ಪಸರಿಸಿತ್ತು. ಒಲ್ಯಾಗಿನ ಹೊಗಿ ಮನಿತುಂಬ ಹಬ್ಬಿತ್ತು. ಅಂಜೀ ರೊಟ್ಟಿಬಡೆಯುತ್ತಿದ್ದಳು. ನಾ ಬಂದ ಕೂಡಲೆ ಕಳ್ಳಗಣ್ಣಿನಿಂದ ನನ್ನನ್ನು ನೋಡಿದಳು. ಹೊಸ ಕುಬುಸ ಹೊಲಿಸೀನಿ ಅಂತ ಮುದುಕಗ ಹೇಳಬ್ಯಾಡ ಅನ್ನೊ ಅರ್ಥ ಅದರಾಗ ಇತ್ತು. ಗೋಡಿಗೆ ಬೆನ್ನಹಚ್ಚಿ ಮೊಣಕಾಲ

ಪ್ಯಾಲೆಮಾಡಿ ಮುದುಕ ಕೂತಿದ್ದ. ನಾ ಒಳಗ ಬಂದರ 'ಬಾ' ಅಂತನೂ ಅನಲಿಲ್ಲ. ಗಿಡ್ಡನ್ನ ಮುನ್ಯಾಗ ಹಾಂಗ ನಿಂತು ನಾ ಅಂದೆ,

"ಏನಜ್ಜ, ಆರಾಮ ಕೂತಿದಿ?"

ಮುದುಕ ಹೂಂ ಅಂದ ಸುಮ್ಮನ ಕೂತ.

ನನಗ ಸಂಕೋಚವೆನಿಸಿ ನಾನು ಹೊಗೆಯಿಂದ ಕಪ್ಪಾದ ಛಪ್ಪರದತ್ತ ನೋಡುತ್ತ ನಿಂತೆ. ಅಂಜೀ ಅಸಮಾಧಾನಪಟ್ಟಿದ್ದು ತೋರತಿತ್ತು. ಅವಳು ಒಮ್ಮೆ ನನ್ನಕಡೆ, ಒಮ್ಮೆ ಮುದುಕನ ಕಡೆ ಹೀಗೆ ಎರಡು ಮೂರಾವರ್ತಿ ನೋಡಿದಳು, ಅವಳು ಕಂಗೆಟ್ಟಿದ್ದಳು. ಮುದುಕನು ನಡಕೊಂಡ ರೀತಿ ಅವಳ ಮನಸಿಗೆ ಬಂದಿಲ್ಲವೆಂಬುದು ತೋರತಿತ್ತು. ಕಟಿಗಿ ತರುವ ನೆವಮಾಡಿ ಹೊರಗೆ ಹೋದಳು. ಒಳಗ ನಾನು. ಮುದುಕ ಇಬ್ಬರ ಉಳದೆವು. ಅವ ಶಟದು ಕೂತಿದ್ದ. ನಾನು ಏನ ಮಾಡಬೇಕೆಂದು ತೋಚದೆ ಹಾಗೆ ನಿಂತಿದ್ದೆ.

ಒಲ್ಯಾಗಿನ ಬೆಂಕಿ ನೊಂದು ಮತ್ತಿಷ್ಟು ಹೊಗೆಯಾಯಿತು. ಒಲಿಮೇಲಿದ್ದ ಗಡಗ್ಯಾಗಿಂದ ಘಮಘಮ ವಾಸನೆ ಬರತಿತ್ತು. ಕುದಿಯುವ 'ರಟರಟ' ಶಬ್ದ ಕೇಳಿಸ ತಿತ್ತು. ಬಾಗಿಲೊಳಗಿಂದ ಬರುವ ಗಾಳಿಯಿಂದ ಹಣತೆಯ ಜ್ಯೋತಿ ಅಲೆದಾಡತಿತ್ತು. ಗೋಡೆಯ ಮೇಲೆ ಜಿಪ್ಪ ನೆರಳೂ ಅಲೆದಾಡುತ್ತಿದ್ದವು. ಏನು ಹೇಳಬೇಕು. ಏನು ಕೇಳಬೇಕು ಎಂಬುದು ತೋಚದೆ ನಾನು ಸಾವಕಾಶ ಅಂದ,

"ನಿಮ್ಮ ಕೂಡ ಖಾಜಗಿ ಮಾತು ಆಡೋದ ಅದ, ಅಜ್ಜ."

ಮುದುಕ ನನ್ನಕಡೆ ಲಕ್ಷಗೊಡಲಿಲ್ಲ.

ಅಷ್ಟರಾಗ ಅಂಜೀ ಕಟಿಗಿ ತಗೊಂಡು ಬಂದು ಒಲ್ಯಾಗಹಾಕಿ ಬೆಂಕಿಮಾಡಿದಳು. ಮುದುಕ ನಿಷ್ಠುರವಾಗಿ ಅಂದ,

"ನನಗೇನೂ ಹೇಳಬಾಡ. ಮೊದಲ ಹೊರಗೆ ಹೋಗು. ನೀ ಹೇಳಿದ್ದನ್ನ ಕೇಳೊ ಇಚ್ಛಾ ನನಗಿಲ್ಲ."

ಓಗಂದು ಎದ್ದಾವನ, ನನ್ನಕಡೆ ನೋಡದನ ಹೊರಗೆ ಹೋಗಿಬಿಟ್ಟ. ಕತ್ತಲ ದಾಗ ಕಾಣದ್ಹಾಂಗ ಆದ.

ನನಗೆ ತೀವ್ರ ಅಪಮಾನವೆನಿಸಿತು. ನನ್ನ ಮುಖ ಕೆಂಪಗಾಯಿತು. ಕಿವಿ ಬಿಸಿ ಯಾದವು. ಉಗುಳುನುಂಗಿ ಕೆಳದನಿಯಲ್ಲಿ, ನಾನು ಹೊರಬೀಳುವಾಗ, ಅಂಜೀ ಅಂದಳು,

"ಆ ಭಾಡಕೊ ದಾದ್ಯಾ, ಮುದುಕನ ಕಿವಿ ಊದ್ಯಾನ. ಬೆಂಕಿ ಹಚ್ಚೋದ ಅವನ ಉದ್ಯೋಗ."

ಅವಳಂದದ್ದನ್ನು ಕೇಳಿದೆ. ವಯಸ್ಸಿನ್ಯಾಗ ಬಂದ ಹುಡುಗಿ ಜೋಡಿ ಮಾತಾ

ಡೋದು ಯೋಗ್ಯವಲ್ಲ ಅಂತ ಅರಿತು ನಾನೂ ಹೊರಬಿದ್ದೆ. ಕತ್ತಲದಾಗ ಎಡವಿಕೋತ ಮನೆಗೆ ಬಂದೆ. ಆಯುಬೂ ದೀಪಹಚಗೊಂಡು ಕೂತಿದ್ದ.

"ದಾದೂ ಬಾಲಟ್ಯಾ ಮುದಕನ ಕಿವೀ ಊದ್ಯಾನ ಆಯುಬೂ. ಅದಕ ಮುದಕ ನನಮ್ಯಾಲಿ ಇಷ್ಟ ಸಿಟ್ಟಿ ಬೆಂಕಿ ಆಗ್ಯಾನ."

ಆಯುಬೂಗ ಒಮ್ಮೆಲಿ ಗುಟ್ಟು ರಟ್ಟ ಆದ್ಹಾಂಗ ಆತು.

"ಹೀಂಗSSS"

"ಹೌದು, ನನಗ ಅದು ತಿಳೀತು ಮತ್ತು ಅದು ನಿಜಾನೂ ಇರಬೇಕು."

"ಮಾಸ್ತರ. ಹಾಂಗ ಐತಿ ಅದು. ನೀ ಅಂದರ ಬಾಲಟ್ಯಾ ಹಾಂಗSS ಬೆಂಕೀ ಕಾರತಾನ."

"ಹಾಂಗ ನನ್ನಮ್ಯಾಲಿ ಬೆಂಕಿಕಾರಲಿಕ್ಕೆ ಅವಗೇನು ಕಾರಣವಿಲ್ಲ. ನಾ ಏನ ಮಾಡೇನಿ ಅವಗ?"

"ನೀ ಬಂದಾಗಿಂದ ಅವನ ಗುಂಡಾತನದ ಆಟ ನಡೆಯುವಲ್ಲದು. ಈಗ ಯಾವ ಅಪ್ಪಗ ಬೆದರೂದಿಲ್ಲ. ಅವಗ ಯಾರೂ ಕೇಳುವದಿಲ್ಲ."

"ಬಾಲಟ್ಯಾ ಗುಂಡಾ ಇದ್ದಾನೇನು?"

"ಗುಂಡಾ ಅಲ್ಲದ ಮತ್ತೇನು? ಒಬ್ಬರ ಜೋಡಿಗಿ ಮತ್ತೊಬ್ಬವನ ತಲಿಮ್ಯಾಲಿ ಹಾಕೋದ ಅವನ ಉದ್ಯೋಗ. ಹೇಳಿ ಮಾಡಿಸಿದ ಗುಂಡಾ ಇದ್ದಾನ."

ಕಾದಂಬರಿಯಲ್ಲಿಯ ಖಳನಾಯಕನಂತೆ ಈ ಬಾಲಟ್ಯಾ ಕೈತೊಳೆದು ನನ್ನ ಬೆನ್ನ ಯಾಕ ಹತ್ಯಾನ, ಇದ ನನಗ ತೋಚುವಲ್ಲದು. ನಾನು ಅವಗ್ಯಂದೂ ನೋಯಿಸಿದ್ದಿಲ್ಲ ಅಥವಾ ಅವನ ಕಡಕೂ ಬಯಸಿದ್ದಿಲ್ಲ. ಮೊದಲಿನಿಂದಲೂ ಅವ ಮಾತ್ರ ನನ್ನ ಕೇಡನ್ನು ಬಯಸತಿದ್ದ. ನನ್ನ ಅವನ ಹಗೆತನ ನೈಸರ್ಗಿಕವಾದಂತಾಗಿತ್ತು— ಕಾಗಿ–ಗೂಗಿ, ಹಾವು–ಮುಂಗಲಿಗಳ ವೈರವಿದ್ದಂತೆ. ನಾ ಈ ಊರಿಗೆ ಬಂದಾಗಿಂದ ಅವನ ವಜನ ಕಡಿಮೆಯಾಗಿತ್ತು. ಅವನ ಸಲಹೆ ಯಾರೂ ಕೇಳತಿದ್ದಿಲ್ಲ. ಯಾರೂ ಅವನ್ನ ಮಾತಾಡಿಸದ್ಹಾಂಗ ಆತು. ಆದರ ಅವ ಮೊದಲನೆ ಭೆಟ್ಟಿಯಲ್ಲಿಯೇ ನನ್ನನ್ನು ಬೆದರಿಸಿದ್ದ, ಅದ್ಯಾಕ? ಮೊದಲಿನ ಮಾಸ್ತರ ಅವನ್ನ ನೋಯಿಸಿರಬೇಕು, ಆದರಿಂದ ಅವ ಇಡೀ ಮಾಸ್ತರಜಾತೀನ ದ್ವೇಷಿಸುತ್ತಿರಬೇಕು. ಆದರೆ ನಾನು ಊರಲ್ಲಿ ನಡಕೊಂಡ ರೀತಿ ನೋಡಿದರ, ಅವನ ಸಿಟ್ಟು ನಿಜವಾಗಿ ಮಾಯವಾಗಿರಬೇಕು.

ಆಯುಬೂ ಮಿದ್ದು ರೊಟ್ಟಿ ಬೇಡಲಿಕ್ಕೆ ಹೊರಟ. ರಾಮಾ ಕುರುಬನ ಹಣ ಮಾಯವಾದಂದಿನಿಂದ ನನ್ನ ನಿದ್ದೀನೂ ಮಾಯವಾಗಿತ್ತು. ಅದರಾಗ ಈಗ ಬಾಲಟ್ಯಾನ ಹಳೆಬ್ಯಾನೆ ಮೇಲಕ್ಕೆದ್ದಿತು. ಮೊದಲಿನಿಂದಲೂ ನನ್ನ ಬೆನ್ನಿಲಬಾಗಿ ನಿಂತ ಮುದುಕ, ಊರ ಹಿರಿಯ ಕಾರಭಾರಿ ನನ್ನಮ್ಯಾಲೆ ತಿರುಗಿಬಿದ್ದಿದ್ದ. ಊರಾಗ ಚಲೋಕೆಲಸ ಮಾಡಿ

ಅಧಿಕಾರಿಗಳಿಂದ ಸಿಫಾರಸು ಪಡೆಯುವ ಹಂಬಲವಿತ್ತು. ಅಷ್ಟರಾಗ ಈ ಘಟನೆಗಳು ಸಂಭವಿಸಿದವು.

ನಾನು ಬೇಸರಗೊಂಡಿದ್ದೆ. ಒಬ್ಬನ ತಿನಕೊತ ಕೂತೆ. ತಿನ್ನುವ ದನೀನು ದೊಡ್ಡದನಿಸಿತು.

ಆನಂದ ರಾಮೋಶಿ ಬಂದು, ಬಾಗಿಲ ಹೊರಗ ನಿಂತು ಅಂದ,

"ಒಬ್ಬನ ಅದೀ ಏನು, ಮಾಸ್ತರ? "

"ಹೌದು, ಊಟಮಾಡಲಿಕ್ಕೆ ಹತ್ತೆನಿ. ಯಾಕೊ ಆನಂದ? "

"ಊಟ ಆಗಲಿ, ಹಿಂದಾಗಡೆ ಬರತೇನಿ."

"ಊಟ ಆತು, ಏನ ಕೆಲಸ ಅದ? "

ನಾನು ರೊಟ್ಟಿ ಕಟ್ಟಿಟ್ಟು ಕೈತೊಳಕೊಂಡೆ. ಆನಂದ ಒಳಗ ಬಂದು ಕೂತು ಕೋಣೆ ಬಾಗಲ ಮುಚ್ಚಿದ.

ಕೆಳದನಿಯಲ್ಲಿ ಕೇಳಿದ,

"ನಿನ್ನವೇನಾರ ರೊಕ್ಕ ಹೋಗ್ಯದ ಏನು? "

ಇದನ್ನು ಕೇಳಿ ನನಗ ತೀವ್ರ ಪೆಟ್ಟು ಹೊಡೆದ್ಹಾಂಗ ಆತು. ಈ ಕಿವೀ ಮಾತು ಆ ಕಿವಿಗೆ ಗೊತ್ತಿದ್ದಿಲ್ಲ. ಈ ರಾಮೋಶಿಗೆ ಹ್ಯಾಂಗ ತಿಳೀತು. ಇವನ ಯಾರ ಹೇಳಿದರು? ಹಣ ಕಳದದ್ದ ಇವಗ ಗೊತ್ತ ಆಗ್ಯದಂದರ, ಅದ ಯಾರ ಹಣ, ಯಾರು ಕೊಟ್ಟಿದ್ದರು, ಯಾತಕ್ಕಾಗಿ ಕೊಟ್ಟಿದ್ದರು ಇದೆಲ್ಲ ಅವಗ ಗೊತ್ತಿರಬೇಕು. ನನ್ನ ಮಾನ ಉಳಿಸಲು ನಾ ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥವಾದಂತೆನೇ ಸೈ. ಮುಡಿ ಇದ್ದ ರಾಣೀ ರೂಪಾಯಿ ನನ್ನ ಕಡೆ ಮುರಿಸಲಿಕ್ಕೆ ಕೊಟ್ಟ ಮಾತು. ಎಲ್ಲರಿಗೂ ಗೊತ್ತಾದ ಮಾತು ಆದಂತಾಯಿತು. ಹಾಂಗಾರ ಈಗ ಇವನ ಮುಂದ ಆದ ಸಂಗತಿ ಹೇಳಬೇಕೋ, ಮುಚ್ಚಿಡಬೇಕೋ ಎಂಬ ವಿಚಾರದಲ್ಲಿ ನಾ ಬಿದ್ದೆ. ನನ್ನ ಮನಸಿನ್ಯಾಗ ಗೊಂದಲನ ಗೊಂದಲ, ಆದರ ನನ್ನ ಬಾಯಿಂದ,

"ಹೌದು, ಆದರ ನಿನಗ್ಯಾರು ಹೇಳಿದರು?" ಅಂತ ಮಾತ ಹೊರಬಿತ್ತು.

"ನನಗ ಗೊತ್ತದ."

"ಅದ್ಯಾಂಗ ಗೊತ್ತಾತು?"

ಆನಂದ ಶಾಂತಚಿತ್ತದಿಂದ ಅಂದ, "ನಾನ ತಗೊಂಡು ಹೋಗಿದ್ದೆ."

ನನ್ನ ಕಿವಿಮ್ಯಾಲೆ ನನ್ನ ವಿಶ್ವಾಸವಿಲ್ಲದಂತಾಯಿತು. ಕಣ್ಣತೆರೆದು, ಬಾಯಿ ತೆರೆದು ನಾ ಬರೀ ನೋಡಕೊತ ನಿಂತೆ.

ಆನಂದ ತಂದ ಗಂಟನ್ನು ಬಿಚ್ಚಿ, ಬಿಗಿಯಾಗಿ ಕಟ್ಟಿದ ಹಣವನ್ನು ನನ್ನ ಮುಂದಿಟ್ಟು ಅಂದ,

"ಹಣ ಹ್ಯಾಂಗ ಒಯ್ದಿದ್ದೆ, ಹಾಂಗ ತಂದೇನಿ. ತಗೋ ಈ ಹಣದ ಒಜ್ಜೆ."

ನಾನು ರೂಪಾಯಿ ಗಂಟಿನ ಮ್ಯಾಲೆ ಜಿಗಿದುಬಿದ್ದೆ. ಮೊದಲ ಅದನ್ನ ಕೈಯಾಗ ತಗೊಂಡು ಬಿಗಿಯಾಗಿ ಹಿಡಿದೆ. ಮನಸಿನ ಮ್ಯಾಲಿನ ಭಾರ ಪೂರಾ ಇಳಿದ್ಹಾಂಗ ಆತು. ನನ್ನ ಸಂಕಟದಾಗ, ಆನಂದ ವೆಂಕಟರಮಣನ್ಹಾಂಗ ಬಂದ ನಿಂತ್ಹಾಂಗ ಆತು. ಆಗ ಆನಂದ ಅಂದ, "ಮಾಸ್ತರ, ಎಣಿಸಿನೋಡು. ನಾ ಅದರಾಗ ಮೂರ ರೂಪಾಯಿ ಹತ್ತಾಣೆ ತಿಂದೇನಿ. ಅದನ್ನ ತಿರುಗಿ ಕೊಡುದಿಲ್ಲ. ಉಳಿದ ರೂಪಾಯಿ ಮಾತ್ರ ಇದ್ಹಾಂಗ ಅವ!"

ಆನಂದನ್ನ ಕಂಡು ನನಗ ಸಿಟ್ಟು ಬಂತು, ಆದರೆ ಒಂದು ರೀತಿ ಅವನ್ನ ನೋಡಿ ಮೆಚ್ಚಿದೆ.

"ಆನಂದ, ನೀ ರೂಪಾಯಿ ತಗೊಂಡ ಯಾಕ ಹೋದಿ ತಿರುಗಿ ಯಾಕ ತಂದಿ?"

"ಮಾಸ್ತರ, ಬಂಡೋಬಾನ ಆಣೆ. ಹಣ ತಗೊಂಡ ಹೋಗಬೇಕು ಅಂತ ನಾ ಏನು ಒಯ್ಲಿಲ್ಲ. ನಿನ್ನ ಹಣ ನಿನಗ ಕೊಡಬೇಕು ಬಂದೇನಿ. ನೀ ತಂದ ರೊಟ್ಟಿ ಗಂಟು ನೋಡಿದೆ, ಒಳೆ ಘಮಘಮ ವಾಸನೆ ಬರತಿತ್ತು. ರೊಟ್ಟಿ ಬೇಕಾಗಿದ್ದವು ಅಂತ ಬಂದೆ. ನೀನು ಮಲಗಿದ್ದಿ. ಮಲಗಿದಾವಗ ಏಬಿಸಬಾರದು ಅಂತ ಅಂತಾರ. ರೊಟ್ಟಿ ಗಂಟು ತಗೊಂಡೆ. ಮಾಸ್ತರ ಎಚ್ಚರಾದರ ನಾಯಿ ಗೀಯಿ ಒಯ್ದಿತ್ತ ಅಂತ ಅಂತಾನ. ಒಯ್ದು ರೊಟ್ಟಿಗಂಟು ಬಿಚ್ಚಿದೆ. ಅದರಾಗ ರೊಟ್ಟಿ ಇದ್ದವು ಮತ್ತ ಮ್ಯಾಲೆ ಉಡಿತುಂಬ ರೊಕ್ಕನೂ ಇತ್ತು, ರೊಕ್ಕ ನೋಡಿ ಕೆಟ್ಟಬುದ್ಧಿನೂ ಹುಟ್ಟಿತು."

"ಬೆಕ್ಕಿಗೆ ಆಟ, ಇಲಿಗೆ ಪ್ರಾಣಸಂಕಟ. ನನ್ನ ಜೀವಾ ಹೋಗಿತ್ತು."

"ಅದ್ಹ್ಯಾಂಗ ಹೊಕ್ಕೈತಿ. ನಿನ್ನ ಬೆನ್ನ ಕಾಯಾಕ ವೆಂಕಟರಮಣ ಅದಾನಲ್ಲ. ಮಾಸ್ತರ, ನಾನು ಬ್ಯಾಡರವ. ಇಷ್ಟು ರೊಕ್ಕ ದಕ್ಕಿಸೋದು ಕಠಿಣ ಮಾತಾಗಿರಲಿಲ್ಲ. ಎಂಟದಿನ ರೊಕ್ಕ ಹಾಂಗ ಇಟಗೊಂಡೆ. ದಿನ ಬೆಳಗಾದರ ಮನಸಿನ್ಯಾಗ ಅನಿಸತಿತ್ತು– ಮಗನ, ಮಾಸ್ತರ ರೊಕ್ಕಕ್ಕ ಯಾಕ ಕೈಹಚ್ಚಿದಿ? ಅವ ಏನ ಸಾವಕಾರನ, ಜಹಾಗಿರದಾರನ? ಅವಗ ಹೀಂಗ್ಯಾಕ ಧೋಕಾ ಕೊಡಬೇಕು? ಯಾವಾಗಲೂ ಅವನ ಕೂಡಾನ ಇದ್ದಾ, ಅವಗ ಧೋಕಾ ಕೊಡೋದು ಬರೋಬರಿ ಅಲ್ಲ. ಹಿಂಗನಕಿ ಈಗ ರೂಪಾಯಿ ನಿನ್ನ ಮುಂದ ಇಟ್ಟೇನಿ. ಫಿರ್ಯಾದಿ ಮಾಡಬೇಕು ಅಂತ ಅನಿಸಿದರ ಹಾಂಗ ಮಾಡು. ಜೇಲಿನ್ಯಾಗ ಕಳಸೊದಿದ್ದರ ಕಳಸು. ಇಲ್ಲದರ ಹಾಂಗ ಬಿಟ್ಟುಬಿಡು."

ಆನಂದ ಈ ಮಾತನ್ನು ಸಹಜವಾಗಿ ಹೇಳಿದ, ಬಿಚ್ಚುಮನಸಿನಿಂದ ಹೇಳಿದ್ದನ್ನೆಲ್ಲ ಕೇಳಿ, ಏನು ಮಾಡಬೇಕು ಅನ್ನೋದ ತೋಚುವಲ್ಲದು. ಚಿಕ್ಕ ಪುಟ್ಟ ಕಳವು ಮಾಡೊ ಆನಂದ, ದೊಡ್ಡ ಕಳವಿಗೆ ಕೈಹಾಕಿದ್ದ. ಆದರ ಅವ ರೊಟ್ಟಿ ಕಳವು ಮಾಡಲಿಕ್ಕೆ ಬಂದಿದ್ದ. ರೂಪಾಯಿ ಕಳವು ಮಾಡೋದು ಅವನ ಕನಸಮನಸಿನ್ಯಾಗೂ ಇದ್ದಿಲ್ಲ. ನನ್ನ ಸಲುವಾಗಿ

ಕನಿಕರಪಟ್ಟು ಹಣ ತಿರುಗಿತಂದಿದ್ದೆ ಅಂತ ಹೇಳಿದ್ದ. ಆದರೆ ಇದೇನು ನಿಜವಿರಲಿಕ್ಕಿಲ್ಲ. ಇಂದಿಲ್ಲ ನಾಳೆ ಈ ಕಳವು ಹೊರಬಿದ್ದು ತನಗ ಘಾತ ಆದಿತೆಂದು ವಿಚಾರಮಾಡಿ, ಆನಂದ ಬರೇ ಮನಷ್ಯಾ ಆಗಿದ್ದ, ಚಿಕ್ಕಪುಟ್ಟ ಕಳವು ಮಾಡಿದಾಗಲೂ, ಅವ ಹದಿನೈದು ಇಪ್ಪತ್ತ ದಿವಸದ ಮ್ಯಾಲೆ ಹೋಗಿ ಮಾಲಿಕರ ಇದುರು ಒಪ್ಪತಿದ್ದ. ಆದರ ಆ ಕಳವು ತೀರ ಕ್ಷುಲ್ಲಕ ಬೆಲೆಯವಿರತಿತ್ತು. ಹೊಲದ ಮಾಲಿಕ ನಾಲ್ಕು ಬೈದು ಕಳಿಸತಿದ್ದ. "ಕೇಳಿದರ ಯಾರೂ ಏನೂ ಕೊಡುವದಿಲ್ಲ. ನಾ ತಗೊಂಡು ಹೋಗೊದಾರ ಎಷ್ಟಿರತದ? ಹೊಟ್ಟಿಗೆ ಎಷ್ಟು ಬೇಕು ಅಷ್ಟ ತಗೊಂಡಿರತೇನಿ, ದನಾ ತಿಂತಾವ, ಹಕ್ಕಿಪಕ್ಕಿ ತಿಂತಾವ, ಹುಳಹುಪ್ಪಡಿ ತಿಂತಾವ, ಹಾಂಗ ಆನಂದ ಸ್ವಲ್ಪು ತಿಂದಾ ಅಂದು. ಕೆಟ್ಟ ಅನಿಸಿಕೊ ಬ್ಯಾಡರಿ ಸಾವಕಾರರ," ಅಂತ ಆನಂದ ಹೊಳವ.

ಚಕಳಿಮುಂಕಳಿ ಹಾಕ್ಕೊಂಡು. ಆನಂದ ನನ್ನ ಮುಂದ ಕೂತ. ನಾ ಏನ ಅಂತೇನಿ ಅಂತ ಲಕ್ಷಕೊಟಕೋತ ಕೂತ. ನಾ ಅಂತೂ ಸಿಟ್ಟಬೆಂಕಿ ಆಗಿದ್ದೆ. ಇನ್ನೊಮ್ಮೆ ಇವನ ಮಾರಿ ನೋಡಬಾರದೆಂದು ಅನಿಸಿತ್ತು. ಇವನಿಂದ ನಾನು ಎಂಥಾ ಗೋಳಿನಲ್ಲಿ ಸಿಕ್ಕಿದ್ದೆ. ಎಂಟ ದಿವಸ ಜೀವಾ ಹೋದ್ಹಾಂಗ ಆಗಿತ್ತು.

"ಜಾಣ ಇದ್ದೀ ಹೋಗು. ಇನ್ನೊಮ್ಮೆ ನಿನ್ನ ಮಾರಿ ತೋರಿಸಬ್ಯಾಡ ನನಗ," ಅಂತ ಜಗ್ಗಿ ಒದರಿ ಹೇಳಿದೆ.

ಆನಂದ ಸುಮ್ಮನಿದ್ದ. ಕಿವಿಮ್ಯಾಲಿನ ಕೊರಿ ಚುಟ್ಟಿ ತಗದ, ದೀಪದ ಮೇಲೆ ಹಚ್ಚಿದ ಮತ್ತು ಸೇದಿಕೊತ ಹೋದ.

ನಾ ಎದ್ದಾವನ ರಾಮುನ ಮನಿಗೆ ಹೋದೆ. ಅವನ ಹಣ ಆವಗ ಕೊಟ್ಟು, ಪಾರಾದಂಥ ನಿಟ್ಟುಸುರು ಬಿಟ್ಟೆ. ರಾಮು ಅಂದ, "ಇಷ್ಟ್ಯಾಕ ಗಡಿಬಿಡಿ ಮಾಸ್ತರ? ನನ್ನ ಹಣ ನಿಮ್ಮ ಮನ್ಯಾಗ ಇದ್ದರೂ, ನನ್ನ ಮನ್ಯಾಗ ಇದ್ಹಾಂಗ."

"ಅದೆಲ್ಲ ನಿಜ" ನಾ ಅಂದೆ.

ನಡುವೆ ಸಂಭವಿಸಿದ ಘಟನೆಗಳ ಕಲ್ಪನೆ ಅವನಿಗಿದ್ದಿಲ್ಲ. ಹೋಗುವಾಗ ರಾಮುನಿಗೆ ಆಗ್ರಹದಿಂದ ಹೇಳಿದೆ, "ಹಣ ಮನ್ಯಾಗ ಇಡಬ್ಯಾಡ. ಎಲ್ಯಾರ ತೊಡಗಿಸು. ಕುರಿ ತಗೊ, ಇಲ್ಲದರ ಭೂಮಿ ತಗೊ. ಆದರ ಇಂಥಾ ಒಜ್ಜಾ ಮನ್ಯಾಗ ಬೇಡ. ಕ್ಯಾಳ್ಯಾ ಹೇಳಿ ಬರುವದಿಲ್ಲ."

ಕೆಲದಿನಗಳ ನಂತರ ರಾಮು ಕುರಿ ತಗೊಂಡ. ಅವನ ಹಿಂಡು ಈಗ ದೊಡ್ಡ ದಾಗಿತ್ತು.

# ೧೨

ಮುಂಗಾರಿ ಭೂಮ್ಯಾಗ ಸೆಜ್ಜಿ ಹಾಂಗ ಬೆಳೆದು ನಿಂತಿತ್ತು. ಉದ್ದುದ್ದ ತೆನಿ ಹಾಂಗ ತೇಲಾಡಕೊತ ಇದ್ದವು. ಹಸಿರು ದಂಟಿನ ತುದಿಗೆ ನಾಸಿಪುಡಿ ಬಣ್ಣದ ತೆನಿ. ಜಾಂಬಳಿ ಬಣ್ಣದ ಹೂವಿನ ಗೊಂಚಲನೂ ಹಾರಾಡತಿದ್ದವು. ನಾಜೂಕಾದ ಹೂವಿನ ಗೊಂಚಲ ಜನರ ಮನಸು ಸೆಳೆಯುತಿದ್ದವು. ಜೇನುತೆನಿ ಹೂವಿನ ಸುತ್ತ ಗುಣಗುಡಿಸ ತಿದ್ದವು. ಹಳದಿ ಬಣ್ಣದ ಸಣ್ಣಸಣ್ಣ ಪಾತರಗಿತ್ತಿ ಜೋಡಾಗಿ ಹಾರಾಡತಿದ್ದವು. ಬೀಸುವ ಗಾಳಿಯಿಂದ ಹೂವು ಉದುರಿಹೋಗಿ, ತೆನಿ ತೆರವಾಗಿ ನಿಂತವು. ಸೆಜ್ಜಿಜೊತೆಗೆ ಬಿತ್ತಿದ ಅಕಡಿಕಾಳಿನ ಬಳ್ಳಿಗಳು ಹಬ್ಬುತಿದ್ದವು. ಹುಳ್ಳಿ ಭರದಿಂದ ಬೆಳೆದಿತ್ತು. ಮಡಕಿ ಕಾಯಿ ತಲೆದೋರಹತ್ತಿದ್ದವು. ತೊಗರಿಯ ನಸುಗೆಂಪಾದ ಕಾಯಿ ಕಾಳಿನಿಂದ ತುಂಬಿದ್ದವು. ಶೆಂಗಾ (ನೆಲಗಡಲೆ) ಹತ್ತಲಿಕ್ಕೆ ಹತ್ತಿದವು. ಒಡ್ಡಿನಮ್ಯಾಲೆ ಬಣ್ಣಬಣ್ಣದ ಕಾಡುಹೂವು ಅಂದಾಗಿ ಕಾಣತಿದ್ದವು. ಹೂಗಳಿಂದ ತುಂಬಿದ ಸೆಜ್ಜಿತೆನಿ ಮಿಂಚುವ ಕಾಳಿನಿಂದ ತುಂಬಿತ್ತು. ಹಕ್ಕಿಗಳು ಗುಂಪುಗುಂಪಾಗಿ ಬಂದು ಕಾಳು ತಿನ್ನುತಿದ್ದವು.

ಒಕ್ಕಲಿಗರು ನಸುಕಿನಲ್ಲಿಯೇ ಹೊಲಕಾಯಲಿಕ್ಕೆ ಹೋಗತಿದ್ದರು. ಬನಗರವಾಡಿ ಹೆಣಮಕ್ಕಳು, ಹುಡುಗರು ಸುತ್ತಮುತ್ತಲಿನ ಹಳ್ಳಿಗಳಿಗೆ ದುಡಿಯಲು ಹೋಗತಿದ್ದರು.

ಸೆಜ್ಜಿಬೆಳೆ ತಯಾರಾಗಿ ನಿಂತಿತ್ತು. ಹುಡುಗರು ಹಸಿ ತೆನಿ, ಕಾಯಿ ತಿಂದು ತಯಾರಾಗಿದ್ದರು. ದಸರಾದ ಬನ್ನಿ ಕೂಡ ಸೆಜ್ಜಿತೆನೀನೂ ಕೊಡತಾ ಇದ್ದರು. ಬೆಳಿ ಕೊಯ್ಯುವ ಸಿದ್ಧತೆ ನಡೆಯಿತು. ಐದು ತಿಂಗಳದಾಗ ಬೆಳದು ನಿಂತ ಸೆಜ್ಜಿದಂಟು. ಕುಡಗೋಲಿಗೆ ಆಡ್ಡಾತು. ಭೂಮಿಮ್ಯಾಲೆ ದಂಟು ಬಿದ್ದರ, ಹಕ್ಕಿ ಕಾಳು ತಿಂದಾವಂತ, ಆದರ ಗೂಡು ಮಾಡಿದರು. ಗೂಡಿನ ಕಾವಿನಿಂದ ಸ್ವಲ್ಪ ಹೊರಬೀಳದ ಕಾಳು ಹೊರಬಿದ್ದವು. ಎರಡು ಮೂರು ದಿನ ಬಿಟ್ಟು ಗೂಡು ಬಿಚ್ಚಿ ಕಾಳಿಗೆ ಬಿಸಿಲು ತೋರಿಸಿದರು. ಹಸಿರು ಕಾಳು ಒಣಗಹತ್ತಿತು.

ದುಡ್ಡಿನ ಅಡಚಣೆ ಇದ್ದವರು ತೆನಿ ಬಡದು ಕಾಳು ಮಾಡಿದರು. ಮನಿ ದನ ಮೇವು ತಿನ್ನಹತ್ತಿದವು. ಮನಿ ಜನ ಹಸಿರು ಬಣ್ಣದ ತಾಜಾ ತಾಜಾ ಸೆಜ್ಜಿರೊಟ್ಟಿ ತಿನ್ನಹತ್ತಿದರು. ಕಾಳು ಇದ್ದವರು ಗೂಡು ಬಡಿಸಿದ್ದಿಲ್ಲ. ಉಳಿದ ಕೆಲಸ ಮುಗಿಸಿ, ರಾಶಿಮಾಡಿದರು. ಯಾಕಂದರ ಇಂದಿಲ್ಲ ನಾಳೆ ಆದರೂ ಗೂಡು ಬಿಡಿಸೊದ ಇತ್ತು,

ಕೆಲವು ದಿನದ ಮ್ಯಾಲೆ ಅಕಡಿಕಾಳೂ ತಯಾರಾದವು. ಹುಳ್ಳಿಕಾಯಿ ಗೆಜ್ಜೆಸಪ್ಪಳ ಮಾಡಹತ್ತಿದವು. ಹುಳ್ಳಿ, ಶೆಂಗಾ, ಮಡಕಿ, ತೊಗರಿ ಎಲ್ಲಾನೂ ತೆಗೆದಾಯಿತು. ಬಯಲು ಹೊಲಗಳಲ್ಲಿ ದನ ಆಡ್ಡಾಡಹತ್ತಿದವು. ಅಲ್ಲಿ ಇಲ್ಲಿ ಬಿದ್ದ ಸೊಪ್ಪು, ಕಾಳು ಕುರಿ ತಿನ ಹತ್ತಿದವು. ಸೆಜ್ಜಿ ಹೊಲ ಬಯಲಾಗಿ ಮತ್ತ ಕೆಂಪಗೆ ಕಾಣಲಿಕ್ಕೆ ಹತ್ತಿತು.

ಕಡಕ ಚಳಿ ಬಂದಿತು. ಯತಿ ಭೂಮ್ಯಾಗಿನ ಜೋಳದ ದಂಟು ಟೊಂಕಮಟ ಬೆಳೆದು ನಿಂತಿದ್ದವು. ನಡುವ ಬಿತ್ತಿದ ಕುಸಬಿಪಟ್ಟಿ ಬೆಳೆದು ನಿಂತದ್ದು ಕಾಣತಿತ್ತು. ಕಡ್ಲಿಗಿಡಕ್ಕ ಜಾಂಬಳಿ ಹೂವು ಆಗಿದ್ದವು. ಕುಸುಬಿಯ ಹಳದಿ ಹೂವು ತಮ್ಮ ಚೆಲುವನ್ನು ಸೂರೆಮಾಡುತಿದ್ದವು. ಹಾಂಗ ಕಡ್ಲಿಗಿಡಗಳಿಗೆ ಬುಡ್ಡಿ ಕಾಣಹತ್ತಿದವು. ಹಸಿರು ಮೇವು ತಿಂದು ದನಗಳು ದುಂಡಗಾದವು. ದನ ಮಿರಿಮಿರಿ ಮಿಂಚುತ್ತ, ತಮ್ಮ ಕೋಡಿಲೆ ಮಣ್ಣುಕೆದರಿ ತೂರತಿದ್ದವು. ಕಬ್ಬು, ಕಡ್ಲಿಗಿಡ ಹುಡುಕಿಕೊತ ಹುಡುಗರು ಚಿಕ್ಕ ಕಳವು ಮಾಡಹತ್ತಿದವು. ಕಾಯುವರ ಕಣ್ಣುತಪ್ಪಿಸಿ ಆಡು ಕುರಿ ಹೊಲಹೊಕ್ಕು ತಿನ್ನತಿದ್ದವು. ಹುಡುಗರು ಮುಳ್ಳಿನಿಂದ ಮಾರಿ ಪರಕೊಂಡು, ಕೈಜಿಗಟು ಮಾಡಿಕೊಂಡು ಹಾರಾಡಿ ಜಿಗದಾಡತಿದ್ದರು.

ಹೇಳಿಕಳಿಸಿದ್ಹಾಂಗ ಪ್ರತಿವರ್ಷ ಬರುವ ಪರದೇಶದ ಹಕ್ಕಿ ಈ ವರ್ಷನೂ ಬಂದವು. ಬೆಳಗ ಹರಿಯೊದರೊಳಗ 'ಡ್ರಾಂವ ಡ್ರಾಂವ' ಶಬ್ದ ದೂರಿಂದ ಕೇಳಿಸತಿತ್ತು. ನಿರಭ್ರ ವಾದ ನೀಲಿ ಆಕಾಶದಲ್ಲಿ ಹಕ್ಕಿ ಮತ್ತು ಪಾತರಗಿತ್ತಿ ಗುಂಪುಗುಂಪಾಗಿ ಹಾರಾಡುತಿದ್ದವು. ಹಾರಹಾರತಾ ಸಾಲುಹಿಡಿತಿದ್ದವು. ಗುಂಪಿಗೆ ಬೇರೆಬೇರೆ ಆಕಾರ ಬರತಾ ಇದ್ದವು. ಬೈಲಾಗ, ಅಂಗಳದಾಗ, ಹೊಲದಾಗ ನಿಂತು ಹುಡುಗರು "ಬೆಳ್ಳಕ್ಕಿ ಬೆಳ್ಳಕ್ಕಿ ಸಾಲಹಿಡಿ" ಅಂತ ಅನ್ನಾವರು.

ಹಕ್ಕಿಗಳು ಹೊಲಗಳ ಮೇಲೆ ದಾಳಿಮಾಡಬಾರದೆಂದು ಒಕ್ಕಲಿಗರು ಕವಣೆಯಿಂದ ಕಲ್ಲುತೂರತಾ ಇದ್ದರು. ಒದರಿ, ಚೀರಿ ಹಕ್ಕಿ ಓಡಿಸತಾ ಇದ್ದರು. ಇಷ್ಟೆಲ್ಲ ಮಾಡಿದರೂ ಈ ಉದ್ದುದ್ದ ಕಾಲಿನ ಹಕ್ಕಿ ದುಂಡಗಾಗಿ ಹಾರಾಡುತ್ತ, ಹವುರಗ ಕೆಳಗಿಳಿದು ತೆನಿ ಮ್ಯಾಲೆ ಕೂತು ಜೋಳದ ಕಾಳು ತಿನ್ನತಿದ್ದವು.

ಈ ಹಕ್ಕಿ ತೂಕ ಮೂರು ಕೋಳಿಯಷ್ಟಿರತಿತ್ತು. ಮೈಯಾಗ ಕೊಬ್ಬು ಇತ್ತು. ಈ ಹಕ್ಕಿ ನೋಡಿ ರಾಮೋಶ್ಯರ ಬಾಯಿಗೆ ನೀರ ಬಿಡತಿತ್ತು. ಬಂದೂಕ, ಕವಣಿಕಲ್ಲು ತಗೊಂಡು ಅಡವಿಗೆ ಹೋಗಿ ಹಕ್ಕಿ ಬೆನ್ನುಹತ್ತಿ ನಾಲ್ಕಾರಾರ ಹೊಡೆದು ತರತಿದ್ದರು. ಬಹಳ ದಿವಸದ ಮ್ಯಾಲೆ ಅವರ ಗುಡಸಲದಾಗಿಂದ ಮಾಂಸ ಕುದಿಸಿದ ವಾಸನೆ ಬರತಿತ್ತು.

ಜೇನುನೊಣ ಎತ್ತರದ ಮ್ಯಾಲೆ ತಮ್ಮ ಹುಟ್ಟನ್ನು ಕಟ್ಟಿದ್ದವು, ಅರಳಿದ ಕುಸುಬಿ ಹೂವಿನೊಳಗಿಂದ ಜೇನುನೊಣ ತುಪ್ಪ ಕೂಡಿಸತಿದ್ದವು, ಇಕ್ಕಟ್ಟಿನ ಜಗಾದಾಗ ಕಟ್ಟಿದ ಹುಟ್ಟನ್ನು, ಕೊಡ್ಲಿ ತಗೊಂಡು ಹೋಗಿ ಟೊಂಗಿ ಕಡದು ಹುಟ್ಟ ಕೆಡವಿ ಜೇನತುಪ್ಪ ಕುರಬರ ಹುಡುಗರು ತಿನ್ನಾವರು,

ಜೋಳದ ಬೆಳಿ ಕೈಗೆ ಬಂದು, ಕಣ ತಯಾರಾದವು. ಕುಸಬಿ ಬಡದಾಯಿತು. ಕಡ್ಲಿ ಒಕ್ಕಿದ್ದಾಯಿತು, ತೆನಿ ಮುರಿದು ತುಳಿಸಿದ್ದಾಯಿತು, ಗಾಳಿಗೆ ಹಿಡಿದು ತೂರಿ ಮುತ್ತಿನ ರಾಶಿ ಮಾಡಿದರು. ಆಯಗಾರರಿಗೆ ಜೋಳ ಕೊಡೋದು ಆಯಿತು. ರಾಶಿ

ಎಣಿಕೆಯಾಯಿತು. ಹಕ್ಕಿ, ದನ, ಕಳ್ಳರು, ಆಯಗಾರರು ಎಲ್ಲರೂ ತಗೊಂಡು ಉಳಿದದ್ದು ರೈತನ ಪಾಲಿಗೆ ಬಂತು.

ಹೊಲ ಬಯಲಾದವು. ಹೊಲದಾಗ ಉಳಿದಿದ್ದ ಶೇಂಗಾ ಬಡವರು ಆರಿಸಿ ಕೂಡಿಸತಿದ್ದರು. ಅಪ್ಪಿತಪ್ಪಿ ಕಾಳು ಬಿದಿದ್ದರ ಅವನ್ನು ಕೂಡಿಸತಿದ್ದರು. ಬಡವರ ಕಣ್ಣುತಪ್ಪಿಸಿ ಉಳಿದ ಕಾಳು ಹಕ್ಕಿ ತಿನತಿದ್ದವು. ಇಷ್ಟೂ ಮೀರಿ ಏನಾರ ಕಾಳ ಭೂಮ್ಯಾಗ ಉಳಿದರ, ಅವು ಹಾಂಗ ಮಳಿ ಹಾದಿ ನೋಡಕೊತ ಅಲ್ಲೆ ಇರತಿದ್ದವು.

ಹತ್ತು ತಿಂಗಳ ಮ್ಯಾಲೆ ಹಸಿರು ಭೂಮಿ ನಸುಗೆಂಪು ಕಾಣಹತ್ತಿತು. ಸುಗ್ಗಿ ಮುಗಿತು. ತಂಬಾಕ ಬಾಯಾಗ ತುಂಬಿಕೊಂಡು ಜನ ಆರಾಮ ಕೂಡಹತ್ತಿದರು. ಕರಡಿ ಆಡಸಾವರು ಬಂದರು, ಡೊಂಬರಾಟ ಬಂದವು, ಹಾವಾಡಿಗರು, ಮೋಡಕೇರರು ತಮ್ಮ ತಮ್ಮ ಆಟ ಮಾಡಿ ತೋರಿಸಿದರು. ಜನರು ಮನರಂಜನೆ ಮಾಡಿಕೊಂಡು ನಗತಾ ಇದ್ದರು. ಮನಸ್ಸಿನಲ್ಲಿ ಸಂತೋಷಗೊಂಡು ಅವರಿಗೆಲ್ಲ ಶೇರ ಕಾಳ ಕೊಡತಾ ಇದ್ದರು.

ಕುರುಬರಲ್ಲಿ ಕೆಲವು ಹುಡುಗರು ಕಲಾವಂತರಿದ್ದರು. ಕನಡಿ ಹಚ್ಚಿದ, ಬಿಳಿ ದಾರದಲೆ ನವಿಲು-ಎತ್ತುಗಳ ಕಸೂತಿ ತೆಗೆದ ಕರೆ ಅರಿವಿ ಮೈಮ್ಯಾಲೆ ಹಾಕಿದ್ದರು. ಕೈಯಾಗ ಬಣ್ಣಬಣ್ಣದ ಕೈವಸ್ತ್ರಗಳಿದ್ದವು. ಢೊಲಿನಾವ 'ಇಡಿಪಾಂಗ–ಡಿಪಾಂಗ' ಅಂತ ದೊಡ್ಡ ಢೊಲನ್ನು ನುಡಿಸುತ್ತಿದ್ದ. ಕೆಲವರು ಝಾಂಜ ಬಾರಿಸುತ್ತಿದ್ದರು, ಬಣ್ಣಬಣ್ಣದ ಕೈವಸ್ತ್ರ ಆಡಿಸುತ್ತ, ಹುಡುಗರು ಹಿಂದಮುಂದ ಹೆಜ್ಜೆಹಾಕತಾ ಇದ್ದರು. ಕುಣಿತ ಆನೆಗತಿಯಿಂದ ಸುರುವಾಯಿತು. ಕ್ರಮೇಣ ಗತಿ ಹೆಚ್ಚಾಗುತ್ತ ನಡೆಯಿತು. ಹೆಜ್ಜೆ ಬೇಗಬೇಗನೆ ಬೀಳಹತ್ತಿದವು. ಬಣ್ಣಬಣ್ಣದ ಕೈವಸ್ತ್ರ ಗತಿಯಿಂದ ಹಾರಾಡ ಹತ್ತಿದವು. ಢೋಲು ಗತಿಯಿಂದ ನುಡಿಯಹತ್ತಿತು. ನೋಡನೋಡುವದರಲ್ಲಿ ಢೋಲಿನವ ಮತ್ತು ಕುಣಿಯುವ ಇಪ್ಪತ್ತೈದು ಹುಡುಗರು ತೀರ ಸಮೀಪ ಬಂದರು. ಒಳೇ ಚಪಲನಾದ ಒಬ್ಬವನ ಕುಣಿತಾನ ಏನೋ ಅಂತಾ ಅನಿಸತಿತ್ತು.

ಕಂಬಳಿ ಮ್ಯಾಲೆ ನೋಡಕೊತ ಕೂತ ಕುರುಬರು, ಬಾಗಿಲದಾಗ ನಿಂತು ನೋಡೊ ಹೆಣಮಕ್ಕಳು, ಹುಡುಗರೆಲ್ಲರೂ ಮೈಮರೆತರು. ಆ ತಾಲ ಎಲ್ಲರನ್ನೂ ಹುರಿದುಂಬಿ ಸಿತು. ಅವರಿಗೂ ತಮ್ಮಲ್ಲಿ ಗತಿಬಂದಿತೆಂದು ಅನಿಸಿತು. ಇಡೀ ಬನಗರವಾಡೀನ ಕುಣಿತಾದ ಅಂತ ಅನಿಸಿತು. '**ಇಡಿಪಾಂಗ–ಡಿಪಾಂಗ–ಡಿಚಿವಾಡಿ–ಡೀಪಾಂಗ–ಡೀಬಾಡಿ–ಡೀಪಾಂಗ–ಡಿಪಾಂಗ–ಡಿಪಾಂಗ**............!'

# ೧೩

ನನ್ನ ವಿಷಯದಲ್ಲಿ ಮನಸು ಕೆಡಿಸಿಕೊಂಡ ಕಾರಭಾರಿ ನನ್ನೊಡನೆ ಬಹಳ ದಿನ ಮಾತನಾಡಲಿಲ್ಲ. ಅವ ನನ್ನ ಮನಿಕಡಿಗಾಗಲಿ ಅಥವಾ ಸಾಲಿಕಡಿಗಾಗಲಿ ಹಣಕಿ ಸಹ ನೋಡಲಿಲ್ಲ. ನನ್ನ ವಿಷಯದಲ್ಲಿ ಕೇಳುವದನ್ನೂ ಬಿಟ್ಟ. ಮೊದಮೊದಲು ನನಗ ಬಹಳ ಕೆಟ್ಟನಿಸತಿತ್ತು. ಆದರೆ ಕ್ರಮೇಣ ನಾನು ಅವನನ್ನು ಮರತೆ. ನನ್ನಲ್ಲಿಯೂ ಸ್ವಲ್ಪ ಸ್ವಾಭಿಮಾನವಿತ್ತು. ನನ್ನ ತಪ್ಪು ಇರದೆ, ಕೇವಲ ಬಾಲಟ್ಯಾನ ಮಾತುಕೇಳಿ ನನ್ನಮೇಲೆ ಸಿಟ್ಟಿಗೆದ್ದು ಮಾತಬಿಟ್ಟ, ಇದು ನನ್ನ ಮನಸಿಗೆ ಕಟಿತು. ನಾನೂ ಅವನ ಜೋಡಿ ಮಾತಾಡುವ ಪ್ರಯತ್ನ ಬಿಟ್ಟೆ.

ಇತ್ತೀಚೆಗೆ ಸಾಲಿ ಕೆಲಸ ಹೆಚ್ಚಾಗಿತ್ತು. ಹೆಚ್ಚೆಚ್ಚು ಹುಡುಗರು ಬರತಾ ಇದ್ದರು. ಅವರ ಹಜೇರಿ, ಪರಿಕ್ಷಾ, ಅಭ್ಯಾಸ ಇತ್ತಕಡೆಗೆ ಗಮನ ಕೊಡಬೇಕಾಗಿತ್ತು. ಮೇಲಧಿಕಾರಿಗಳೂ ಬಂದು ಹೋಗತಾ ಇದ್ದರು. ಹಳ್ಯಾಗಿನ ಸಾಲಿ ಹ್ಯಾಂಗ ನಡೀತಾವ, ಅವುಗಳ ಯಶ ಅಪಯಶಗಳು ಯಾವವು ಮತ್ತು ಏಕೆ, ಇದರ ಅರಿವು ಶಿಕ್ಷಣಖಾತೆಯಲ್ಲಿ ಮೂಡಿತ್ತು. ಮೇಲಿಂದ ಮೇಳೆ ಸಲಹೆ, ಸೂಚನೆ, ಹೊಸ ಆಜ್ಞೆಗಳು ಬರತಾ ಇದ್ದವು. ಸುಗ್ಗ್ಯಾಗ ಅತ್ತಿತ್ತ ಹೋದ ಹುಡುಗರನ್ನು ಕೂಡಿಸುವ ಕೆಲಸವನ್ನು ಆಯುಬೂ, ಆನಂದ ಮಾಡತಾ ಇದ್ದರು. ಊರವರು ಈಗ ಯಾವ ತೊಂದರೆ ಕೊಡತಾ ಇರಲಿಲ್ಲ, ಟೀಕೆಯನ್ನೂ ಮಾಡತಿರಲಿಲ್ಲ. ಸಾಲಿ ತಮ್ಮದು ಮಾಸ್ತರನೂ ತಮ್ಮವ ಎಂಬ ಭಾವನೆ ಬಂದಿತ್ತು.

ಒಂದು ಸೋಮವಾರ ನಾನು ಸಾಲಿಗೆ ಹೋದೆ. ಮೂರನೆ ಯತ್ತೆಯಲ್ಲಿದ್ದ ಸತಾ ಒಬ್ಬನೇ ಒಂದು ತೋಳ ಹೊಡೆದ ಎಂಬ ಸುದ್ದಿ ಹುಡುಗರು ಹೇಳಿದರು. ನನಗೆ ಆಶ್ಚರ್ಯವೆನಿಸಿ ಕೇಳಿದೆ,

"ಹ್ಯಾಂಗ ಹೊಡೆದ?"

"ಜಾಲಿ ಕಡಿಯೊ ಕೊಡ್ಲಿಲೆ ಹೊಡೆದ. ಅದರ ಚರ್ಮ ಸುಲಿದು ಮನ್ಯಾಗ ತೂಗ ಹಾಕ್ಯಾನ."

"ಸತಾ ಬಂದಿಲ್ಲೇನು, ಅವ ಎಲ್ಲಿ ಇದ್ದಾನ?"

"ಇನ್ನ ಅವ ಸಾಲಿಗೆ ಬರೊಹಾಂಗಿಲ್ಲರಿ. ಅವನಪ್ಪ ಅವಗ ಕುರಿಹಿಂಡ ಬಿಟ್ಟಾನ."

ದಿನದಂತೆ ರಾತ್ರಿ ಜನ ಸಾಲಿ ಬೈಲಿನ್ಯಾಗ ಬಂದ ಕೂತರು. ಸತಾ ತೋಳ ಹೊಡೆದದ್ದು ನಿಜವೇನು ಎಂದು ಕೇಳಿದಾಗ ಅದರ ಕಥಿ ಪೂರಾ ಹೇಳಿದರು.

ವಾಡಿಯ ಸುತ್ತಲಿರುವ ಅಡವಿಯಲ್ಲಿ ಒಂದೆರಡು ತೋಳಗಳು ಇದ್ದವು. ಒಂದ ಎರಡ ಹೀಂಗ ಸ್ವಲ್ಪ ಹಿಂಡುಗಳಿದ್ದರ ಅವು ಒಂದೆರಡು ಕುರಿ ತಗೊಂಡು ಹೋಗತಿದ್ದವು. ಸುಸೂತ್ರವಿದ್ದರ ಕಾಯಾವರು ಅದರ ಬೆನ್ನ ಹತ್ತಿದ್ದರು. ತೋಳ ಅಂಜಿ ಹಾಗೆ ಒಮ್ಮೊಮ್ಮೆ ಕುರಿ ಬಿಟ್ಟು ಓಡಿಹೋಗತಿತ್ತು. ಕುರಿ ಗೋಣು ಮುರದಿದ್ದರ ಮಾವರು ಅಲ್ಪಬೆಲೆಯಲ್ಲಿ ಅದನ್ನು ಕೊಂಡು ತಿನತಿದ್ದರು. ಆದರೆ ಸಾಮಾನ್ಯವಾಗಿ ತೋಳ ಕುರಿ ಓಡಿಸಿಕೊಂಡು ಹೋಗತಾ ಇತ್ತು ಮತ್ತು ಕುರಿ ಕಾಯಾವ ಬೆನ್ನ ಹತ್ತೊದು ಬಿಟ್ಟು ತಿರುಗಿ ಬರತಿದ್ದ. ಇತ್ತೀಚೆಗೆ ತೋಳನ ಕಾಟ ಬಹಳವಾಗಿತ್ತು. ಆಗ ಹತ್ತಿಪ್ಪತ್ತು ತರುಣ ಕುರುಬರು ಕೊಡ್ಲಿ ತಗೊಂಡು ಬೆನ್ನಹತ್ತಿದ್ದರು. ರಣರಣ ಬಿಸಿಲಿನಲ್ಲಿ ತೋಳ ಹುಡುಕಲಿಕ್ಕೆ ಪ್ರಯತ್ನ ಮಾಡತಿದ್ದರು. ಒದರ್ಯಾಡಿ ತೋಳ ಎಬ್ಬಿಸಾವರು. ಆದರ ತೋಳ ಬಹಳ ಜಾಗ್ರತ ಪ್ರಾಣಿ. ಅದು ಸುಲಭವಾಗಿ ಸಿಗತಿರಲಿಲ್ಲ. ನಿರಾಶರಾಗಿ ತಿರುಗಿಬಂದ ಈ ತರುಣರು, ಹೊಲದಾಗ ಹೋಗಿ ಕಡ್ಲಿಗಿಡ ತಗೆಯುವರು, ಚವಲೆಕಾಯಿ ತಿನ್ನುವರು ಮತ್ತು ತಿರುಗಿ ಊರಸೇರತಿದ್ದರು. ತೋಳ ತಿನ್ನುವ ಪ್ರಾಣಿಯಲ್ಲವೆಂದು ಅದನ್ನು ಕೊಲ್ಲುವವರಲ್ಲಿ ರಾಮೋಶಿಯವರಿಗೆ ಸ್ವಾರಸ್ಯವಿದ್ದಿಲ್ಲ. ಹಿಂದಿನ್ಕಾಗಿನ ಕುರಿ ತೋಳ ತಿಂದರ, ಕುರಿಗೆ ರೋಗ ಬರುವದಿಲ್ಲೆಂಬ ಮೂಢನಂಬಿಗಿನೂ ಇತ್ತು. ಇದು ಗೊತ್ತಾಗಿ ತೋಳ ದಿಟ್ಟಾಗಿತ್ತೊ ಏನೋ !

ಬೀರಾ ಊರಿಗೆ ಹೋಗವ ಇದ್ದ. ಆವ ತನ್ನ ಮಗ ಸತಾಗ ಕುರಿ ಕಾಯಲಿಕ್ಕೆ ಕಳಿಸಿದ್ದ. ಕೊಡ್ಲಿ ತಗೊಂಡು ಸತಾ ಕುರಿ ತಗೊಂಡು ಅಡವಿಗೆ ಹೋಗಿದ್ದ. ಸಂಜೆ ಸುಮಾರಕ್ಕೆ ಎತ್ತರ ಮ್ಯಾಲೆ ನಿಂತು, ಕುರಿ ಹಿಂಡು ನೋಡಿ ತೋಳ ತನ್ನ ಲೆಖ್ಖ ಹಾಕಿತು, ಕಂಟಿ ಓಂದಿಂದ ಮರೆಯಾಗುತ್ತ ಸಾವಕಾಶ ಸದ್ದಿಲ್ಲದೆ ಅದು ಕುರಿ ಹಿಂಡಿನ ಹತ್ತರ ಬಂದು ಹಿಂಡಿನಿಂದ ದೂರಿದ್ದ ಒಂದು ಕುರಿ ಹಿಡಿದು ಓಡಹತ್ತಿತು. ಸತಾಗ ಅದರ ಸುಳಿವಿದ್ದಿಲ್ಲ. ನಾಯಿ ಒದರಲಿಕ್ಕೆ ಹತ್ತಿ ಅದರ ಹಿಂದ ಓಡಿತು. ಆಗ ಸತಾನ ಗಮನ ಅತ್ತ ಸೆಳೆಯಿತು. ತೋಳ ತನ್ನ ಬ್ಯಾಟಿ ಹಿಡಕೊಂಡು ವೇಗದಿಂದ ಓಡತಿತ್ತು.

ಬಯಕೊತ ಸತಾ ಅದರ ಬೆನ್ನಹತ್ತಿದ. ಹಾಂಗ ಓಡಕೊತ ತೀರ ಅದರ ಸಮೀಪ ಹೋದ. ನಾಯಿ ಬೆನ್ನಹತ್ತಿ ಅದರ ಹಿಂಭಾಗ ಹಿಡಿದಿತ್ತು. ನೋವು ತಾಳಲಾರದೆ ತೋಳ ಬ್ಯಾಟಿ ಒಗದು, ತಿರುಗಿ ನಿಂತು ಹಲ್ಲು ಕಿಸಿದು ನಾಯಿ ಹಿಡಿಯೊ ಪ್ರಯತ್ನ ನಡೆಸಿತು. ನಾಯಿಯಿಂದ ಬಿಡಿಸುವ ಪ್ರಯತ್ನ ನಡೆಸಿತು. ತೋಳ ತಿರುಗಿದಾಂಗ ನಾಯಿ ತಿರುಗತಿತ್ತು. ಅದರ ಹಿಂಭಾಗ ಬಿಡಲಿಲ್ಲ. ಬಹಳ ಸಾರೆ ತಿರುಗಿದರೂ ನಾಯಿ ಅದನ್ನ ಬಿಡುವಲ್ಲದು. ತೋಳ ನಾಯಿಗಳ ಕುಸ್ತಿ ನಡೀತು. ಧೂಳ ಹಾರಹತ್ತಿತು. ಏನಿದ್ದರೂ ತೋಳನ ಕಸುವಿನ ಇದುರು ನಾಯಿ ಸೋತಿತು. ನಾಯಿನ್ನ ಚೋರಲೆ ಒಗೆದು, ತೋಳ ಅದರ ಎದಿ ಮ್ಯಾಲೆ ಕೂತು, ಕುತಿಗಿ ಹಿಡಿತು. ಅಷ್ಟರಾಗ ಸತಾ ಬಂದ

ಮತ್ತು ಒಂದರಮ್ಯಾಲೊಂದು ಕೊಡ್ಲಿ ಏಟು ತೋಳದ ಮ್ಯಾಲೆ ಹಾಕಿದ. ಕುತಿಗ್ಗೆ ಪೆಟ್ಟು ಬಿದ್ದು ರಕ್ತದ ಕಾರಂಜಿ ಪುಟಿತು.

ತೋಳ ಸತ್ತಿತು, ನಾಯಿನೂ ಸತ್ತಿತು. ಅಲ್ಲೆ ಒಂದು ತಗ್ಗ ತಗದು ಸತಾ ನಾಯಿನ್ನ ಹುಗದ. ಅವನು ಅತ್ತನು. ಸತ್ತ ಕುರಿ ಹೆಗಲ ಮ್ಯಾಲೆ ಹಾಕ್ಕೊಂಡು, ತೋಳನ ಕಾಲಿಗೆ ಹಗ್ಗಾ ಕಟ್ಟಿ, ಅದನ್ನು ಜಗ್ಗುತ್ತ, ದೀಪ ಹಚ್ಚೊ ವ್ಯಾಳ್ಯಕ್ಕ ತಿರುಗಿ ಊರಿಗೆ ಬಂದನು. ಆದ ಸಂಗತಿ ಹೇಳಿ, ನಾಯಿ ಸತ್ತದ್ದಕ್ಕ ಬಹಳ ಅತ್ತನು. ತಾಯಿ ಸಮಾಧಾನ ಮಾಡಿದಳು. ಅವನನ್ನು ಅಪ್ಪಿಕೊಂಡು ಅಂದಳು,

"ಇರಲಿ ಬಿಡು, ನಾಯಿ ಸತ್ತರ ಸತ್ತಿತು. ಸಾಯೊಮುಂದ ತೋಳನ ರಕ್ತ ಕುಡಿದು ಸತ್ತಿತು. ಸತ್ತ ಕುರಿ ನಾಯಿಗೆ ಸಿವಾಳಿಸು. ಇನ್ನ ಅಳಬೇಡ."

ಇದನ್ನೆಲ್ಲ ಕೇಳಿ ಸತಾನ ಅಭಿನಂದನ ಮಾಡಲು ನಾನು ಆತುರನಾಗಿದ್ದೆ, ಸತಾ ನಾಲ್ಕಾರು ದಿನ ಸಾಲಿಗೇ ಬರಲಿಲ್ಲ. ಹೇಳಿಕಳಿಸಿದರ ಮನ್ಯಾಗ ಇಲ್ಲ, ಕುರಿಕಾಯಲಿಕ್ಕೆ ಹೋಗ್ಯಾನ ಅಂತ ತಿಳೀತು.

ಒಂದು ದಿನ ನಾನ ಬಿಡುವು ಮಾಡಿಕೊಂಡು, ಅವನ ವಸತಿ ಇದ್ದಕಡೆ ಹೋದೆ. ಸೂರ್ಯ ಮುಳುಗಿದ್ದ ಮತ್ತು ಮುಸಕುಮುಸಕಾದ ಬೆಳದಿಂಗಳಿತ್ತು. ಹಿಂಡಿನ ಹತ್ತರ ಬಂದಾಗ, ನಾಯಿ ಮೈಮ್ಯಾಲೆ ಬಂದಿತೆಂದು ಅಂಜಿ ದೂರಿಂದ ಸತಾನ್ನ ಒದರಿದೆ,

"ಓ ಸತಾSSS"

"ಯಾರವರು?" ಎಂಬ ದನಿ ಕೇಳಿತು.

"ನಾನು ಮಾಸ್ತರ, ನಿನ್ನ ನಾಯಿ ಹಿಡಿ, ಎಲ್ಲ್ಯಾರ ಮೈಮ್ಯಾಲೆ ಬಂದೀತು."

"ನಾಯಿ ಇಲ್ಲರಿ ಮಾಸ್ತರ, ಬರ್ರಿ."

ಮೊನ್ನೆ ಅವನ ನಾಯಿ ಸತ್ತದ್ದು ನೆನಪಾಗಿ, ನನಗ ನಾಚಿಗೆ ಅನಿಸಿತು. ಅವನ ಅಂಗಳ ಸಾರಿಸಿದ್ದಿತ್ತು. ಮನಿ ಇದುರಿಗೆ ಮಣ್ಣಿನ ತುಳಸಿಕಟ್ಟಿ ಇತ್ತು. ಅದರಾಗ ತುಳಸಿ ಬೆಳೆದು ನಿಂತಿತ್ತು. ಕಟ್ಟಿಮ್ಯಾಲೆ ಕಂಬಳಿ ಹಾಸಿ ಸತಾ ಅಂದ,

"ಕೂಡ್ರಿ."

ಬೆಳದಿಂಗಳಲ್ಲಿ ಅವನ ದನಗಳು ಗೊದ್ಲಿಯಲ್ಲಿ ಮೇಯುತ್ತಿದ್ದವು. ಮೇವು ತಿನ್ನುವ ಶಬ್ದ ಕೇಳಿಸತಿತ್ತು.

"ಭಲೆ, ಒಳೆ ಧೈರ್ಯಮಾಡಿ ತೋಳ ಹೊಡಿದಿ. ನನಗೆಲ್ಲ ತಿಳೀತು."

"ತೋಳ ನನ್ನ ನಾಯಿನ್ನ ಕೊಂದತೀರಿ."

"ಅದೂ ತಿಳಿಯಿತು."

ಒಂದು ಕ್ಷಣ ನಾನೂ ಸುಮ್ಮನಿದ್ದೆ, ಅವನೂ ಸುಮ್ಮನಿದ್ದ. ಅಷ್ಟರಾಗ ಅವನ ಅಪ್ಪ ಹಾಲಿನ ಚರಗಿ ತಗೊಂಡ ಬಂದ.

"ಹೊತ್ತಮಾಡಿ ಬುದರಿ, ಹಾಲ ಹಿಂಡತಿದ್ದೆ" ಬೀರಾ ಅಂದ.

"ಹಾಂಗ ಅಡ್ಯಾಡಕೋತ ಬಂದೆ."

"ನಮ್ಮ ಮನ್ಯಾಗ ಚಹಾಗಿಹಾ ಏನಿಲ್ಲ. ಹಾಲ ತಗೋತಿರೇನು?"

"ನನಗ ಚಹಾನೂ ಬ್ಯಾಡ, ಹಾಲೂ ಬ್ಯಾಡ."

"ಹಾಂಗಂದರ ಹ್ಯಾಂಗರಿ, ತಗೊಳ್ಳಾರಬೇಕು. ಏ ಹುಡುಗ ಹೋಗು, ಭಾಂಡಿ ತಗೊಂಡ ಬಾ."

ಬೀರಾ ನನ್ನ ಹತ್ತಿರ ಕಟ್ಟಿ ಮ್ಯಾಲೆ ಕೂತ.

"ನಾಲ್ಕು ದಿನ್ಹಾ ಆದರೂ ಸತಾ ಸಾಲಿಗೆ ಬಂದಿಲ್ಲ" ನಾ ಅಂದೆ.

"ಕುರಿ ತಗೊಂಡು ಹೋಗು ಅಂತ ನಾನ ಹೇಳಿದ್ದೆ, ಅದಕ್ಕ ಬರಲಿಲ್ಲ."

"ನಿನ್ನ ಅಡಚಣಿ ತೀರಿದ್ದರ ಆವನ್ನ ನಾಳಿಂದ ಸಾಲಿಗೆ ಕಳಿಸು."

ಬೀರಾ ನಕ್ಕು ಭಾಂಡ್ಯಾಗ ಹಾಲ ಹಾಕಿ ನನ್ನಿದುರು ಇಟ್ಟ. ಹಾಲಿನ ಚರಗಿ ಒಳಗಿಡಲಿಕ್ಕೆ ಸತಾಗ ಹೇಳಿದ.

ರುಚಿಗಟ್ಟಾದ ಹಾಲು ಕುಡಿದೆ. ಕುರಿಹಾಲಿಗೆ ಸ್ವಲ್ಪ ಅಡ್ಡವಾಸನೆ ಇರತದ, ಆದರ ಈಗ ನನಗ ಅದರ ಅಭ್ಯಾಸ ಆಗಿತ್ತು.

"ಇನ್ನಮುಂದ ಸತಾ ಸಾಲಿಗೆ ಬರುದಿಲ್ಲ ಮಾಸ್ತರ! ನಾನ ಹೋಗಬ್ಯಾಡ ಅಂತ ಹೇಳಿನಿ. ಸಾಕಲ್ಲ ಸಾಲಿ ಇನ್ನ. ನಮ್ಮ ಕೆಲಸಕ್ಕೆ ಬರಬೇಕಲ್ಲ."

"ಹೀಂಗ ಒಮ್ಮೆಲೆ ಸಾಲಿ ಬಿಡಿಸಿದರ ಹ್ಯಾಂಗ? ಏಳನೆ ಯತ್ತನಾರ ಆಗಲಿ ಅಲ್ಲ."

ಇಲ್ಲಿಂದು ಗೋಣ ಅಳಗಾಡಿಸಿ ಬೀರಾ ಅಂದ,

"ಕಲ್ತು ಏನ ಮಾಡೊದ್ಯೆತಿ? ಈ ಅಸಾಮಿ ಒಳೇ ತಯಾರಾಗ್ಯೆತಿ. ಒಬ್ಬನೇ ತೋಳ ಹೊಡೆದಾನ. ಈಗೇನು ಅವ ಹುಡುಗಲ್ಲ. ಇನ್ಯಾಕ ಅವಗ ಸಾಲಿ, ಪಾಟಿ, ಪುಸ್ತಕ? ನಮ್ಮ ಕೆಲಸಕ್ಕ ಹತ್ತಲಿ."

ನಾನು ಅವಗ ತಿಳಿಸಿ ಹೇಳಿದೆ. ಆದರ ಇನ್ನೂ ನಾಲ್ಕು ವರುಷ ಸತಾಗ ಸಾಲಿಗೆ ಕಳಿಸಲಿಕ್ಕೆ ಅವ ತಯಾರಿದ್ದಿಲ್ಲ. ಖಂಡಿತವಾಗಿ ಅವನ್ನ ಸಾಲಿಗೆ ಕಳಿಸುದಿಲ್ಲ ಅಂತ ಮತ್ತಮತ್ತ ಹೇಳಿದ. ನನ್ನ ಕೈಯಾಗ ಒಬ್ಬ ಹುಡುಗ ಆದ; ನನ್ನ ಕೆಲಸ ಲಗುಲಗು ಆಗತಾದ. ಸತಾನೂ ಸಾಲಿಗೆ ಹೋಗತೇನಿ ಅಂತ ಹಟಮಾಡಿಲ್ಲ, ನೀವೂ ಆಗ್ರಹ ಮಾಡಬೇಡಿರಿ. ಎದ್ದು ತಂಪು ಗಾಳ್ಯಾಗ ನಾನು ತಿರುಗಿ ಊರಕಡೆ ಹೋದೆ. ನನಗ ಸ್ವಲ್ಪ ವ್ಯಸನವೆನಿಸಿತು,

ಮರುದಿನ ಮಧ್ಯಾನ್ಹ ಸಾಲಿ ಮುಗಿಸಿ, ನಾನು ಝಳಕ ಮಾಡಲಿಕ್ಕೆಂದು ಭಾವಿಕಡೆ ಹೊರಟೆ. ನನ್ನ ಹಿಂದಿಂದ ಮುದಕ ಕಾರಭಾರಿ ಬರಲಿಕ್ಕೆ ಹತ್ತಿದ್ದ. ನಾ ಒಂದು ಎರಡು ಸಾರೆ ಹಿಂತಿರುಗಿ ನೋಡಿದೆ, ಅವ ನನ್ನ ಬೆನ್ನಹತ್ತಿ ಬರತಿದ್ದ. ರಂಟೆ ಹೊಡೆದ ಭೂಮಿ

ಮಧ್ಯಾಹ್ನದ ಬಿಸಿಲಿನಿಂದ ಕಾಯತಾ ಇತ್ತು. ಮುದಕ ಕಾರಭಾರಿ ಏರಗಟ್ಟಿ ಹಾಕ್ಕೊಂಡೇ, ಬರೀಮೈಲೆ ಬದುವು ಹಿಡಕೊಂಡು ನನ್ನ ಹಿಂದೆ ಬರತಾ ಇದ್ದ. ಅವ ತನ್ನ ಕೆಲಸಕ್ಕ ಹೊರಟಿರಬೇಕೆಂದು ನಾನು ಅಂದುಕೊಂಡೆ. ನಾನು ಬದುವು ಬಿಟ್ಟು ಹೊಲದಾಗಿನ ಹೆಂಡಿ ತುಳಕೊತ ಭಾವಿಕಡೆ ಹೊರಟೆ. ಅವನೂ ಬದುವು ಬಿಟ್ಟು ಭಾವಿಕಡೆ ಹೊರಟ. ಝಳಕ ಮಾಡಲಿಕ್ಕೆ ಬಂದಿರಬೇಕು ಅಂತ ಅಂದರ ಅವನಕಡೆ ಚರಗಿನೂ ಇದ್ದಿಲ್ಲ. ಬೇರೆ ಅರವಿನೂ ಇದ್ದಿಲ್ಲ. ಅಕಾರಣ ನನ್ನ ಎದಿ ಡವಡವ ಅನ್ನಹತ್ತಿತು. ಹಿಂದೆ ನೋಡದನ ನಾನು ಭಾವಿಕಡೆ ಹೋದೆ. ಅರವಿ ತಗದು ಚಡ್ಡಿ ಏರಿಸಿ ಕೆಳಗಿಳಿದು ನೀರಾಗ ಬಿದ್ದೆ. ಸ್ವಲ್ಪು ಹೊತ್ತು ನೀರಾಗ ಎದ್ದು ಬಿದ್ದು ಮಾಡಿ ಮ್ಯಾಲೆ ಬಂದು ಕೂತು, ಮೈ ತಿಕ್ಕಿಕೊಳ್ಳಲಿಕ್ಕೆ ಹತ್ತಿದೆ.

ಮುದಕ ಕಾರಭಾರಿ ಮೆಟ್ಟಲ ಇಳಿದು ಒಳಗ ಬಂದ. ನಾ ಕೂತ ಮೆಟ್ಟಲಕ್ಕಿಂತ, ಎರಡು ಮೆಟ್ಟಲು ಮೇಲೆ ಕೂತ. ಸ್ವಲ್ಪು ಹೊತ್ತು ಸುಮ್ಮನಿದ್ದು ಅಂದ,

"ಹೀಂಗ ಒಂದ ಊರಾಗ ಇದ್ದು ಮಾತ ಬಿಡೋದು ನೆಟ್ಟಗಲ್ಲ, ಮಾಸ್ತರಾ."

ತಾನಾಗೀನ ಮಾತಾಡಿದ್ದು ಕೇಳಿ ನನಗ ಆಶ್ಚರ್ಯವೆನಿಸಿ ನಾ ಅಂದೆ,

"ಬಾಬಾ, ಮಾತ ಬಿಟ್ಟದ್ದು ನೀವು, ನಾನಲ್ಲ."

"ಆದರ, ನಾ ಯಾಕ ಮಾತ ಬಿಟ್ಟೆ ಅದನ್ನ ಕೇಳಿದಿ ಏನು?"

"ಯಾಕ ಕೇಳಲಿ?"

"ಯಾಕ? ಮಾನ ಹೋತ ಅಂತ ಅನಿಸಿತೇನು? ಮಾನ, ಅಪಮಾನ ಇವೆಲ್ಲ ಹಿರಿಯರಿಗೆ ಇರಬೇಕು. ನಿನ್ನಂಥ ಹುಡುಗ್ಗೆ ಯಾಕೋ ಅವು?"

ಮಾತು ಕೇಳಿ ನನ್ನ ಮನಸು ಸ್ವಲ್ಪು ಕದಲಿತು. ಹೀಂಗ ಶಟದು ನಾ ನಡೆಯ ಬಾರದಿತ್ತು. ಮುದಕನ್ನ ತಿಳಕೊಂಡು, ಸಿಟ್ಟಾದ ಕಾರಣ ಕೇಳಿದ್ದರ ಅವ ಖಂಡಿತ ಅದನ್ನ ಹೇಳತಿದ್ದ. ಮುಂದ ಅವನ ಅಂದ,

"ನೀ ಅಂಜೀಗ ಕುಬಸ ಕೊಟ್ಟಿ ಅಂತ ಬಾಲಟ್ಯಾ ಹೇಳಿದ. ಇದು ನಿಜ ಏನು?"

ನನ್ನ ಮಾರಿ ಬಾಡಿದ್ಹಾಂಗ ಆತು. ಒಂದು ನಿಮಿಷ ಏನು ಹೇಳಬೇಕು ತೋಚುವಲ್ಲದು. ಮುದಕ ಈ ಪ್ರಶ್ನೆ ಕೇಳತಾನಂತ ನನ್ನ ಕನಸಮನಸಿನಲ್ಲಿಯೂ ಇರಲಿಲ್ಲ. ನನ್ನೊಡನೆ ಮಾತು ಬಿಟ್ಟಿದ್ದರ ಹಿಂದೆ ಇಂಥ ಕಾರಣವಿರಬಹುದೆಂಬ ಎಳ್ಳಷ್ಟು ಕಲ್ಪನೆಯೂ ನನ್ನಲ್ಲಿರಲಿಲ್ಲ. ಅಂಜೀಗೆ ನಾ ಯಾವಾಗೋ ಒಮ್ಮೆ ಕುಬಸ ತಂದಕೊಟ್ಟೆನಿ ಅನ್ನೊ ಮಾತೂ ನಾನು ಮರೆತಿದ್ದೆ. ನಾನು ಮಾತನಾಡದೆ ಇದ್ದದ್ದನ್ನು ನೋಡಿ ಮುದಕ ಅಂದ,

"ನೀ ಕುಬಸ ಕೊಟ್ಟದಿ ಅಂತ ಅವ ಹನಮಂತನ ಪಾದ ಮುಟ್ಟಿ ನನಗ ಹೇಳಿದ. ನೀ ಕೊಡೋಮುಂದ ಅಂಜೀ ಅದನ್ನ ನಕ್ಕೊತ ತಗೊಂಡಳಂತನೂ ಹೇಳಿದ. ಇದನ್ನು

ಕೇಳಿ ನನ್ನ ತಲಿತಿರುಗಿ ನಾ ಅಂಜೀನ್ನ ಬಡದ ಬಡದೆ. ನಿನ್ನಕೂಡ ಮಾತ ಬಿಟ್ಟೆ. ಆದರ ಮುಂದ ನಿನ್ನ ನಡತ್ಯಾಗ ನನಗೆಂದೂ ತಪ್ಪು ಕಾಣಲಿಲ್ಲ. ಇದರಾಗಿನ ನಿಜ ಮಾತು ತಿಳಕೊಬೇಕಂತ ನಿನಗ ಕೇಳದೆ,"

"ಇದೆಲ್ಲ ಬನಾವಟಿ ಮಾತು. ಬಾಲಟ್ಯಾ ಬದಮಾಷ ಇದ್ದಾನ. ನಮ್ಮ ಗಳೆತನ ಅವನಿಗೆ ಸಹನವಾಗಿಲ್ಲ. ಅದಕ್ಕ ಈ ಸುಳ್ಳುಕಥಿ ನಿನಗ ಹೇಳ್ಯಾನ." ನನ್ನ ಉಸಿರು ವೇಗದಿಂದ ನಡೆದಿತ್ತು, ಎದಿ ಡವಡವ ಅನ್ನತಿತ್ತು.

"ಆದರ, ಕುಬಸ ಕೊಟ್ಟದ್ದು ನಿಜ."

"ಹೌದು, ಆದರ ನಾ ಏನು ಕುಬಸ ಫುಕಟ ಕೊಟ್ಟಿಲ್ಲ. ಅಂಜೀ ತಾನ ಖಣ ಕೊಟ್ಟು ತಾಲೂಕಿನಿಂದ ಹೊಲಿಸಿಕೊಂಡು ಬರಲಿಕ್ಕೆ ಹೇಳಿದ್ದಳು. 'ಇದನ್ನೆಲ್ಲ ನಾ ಕಳವಿಲೆ ಮಾಡತೇನಿ, ಮುದಕಗ ಹೇಳಬ್ಯಾಡರಿ' ಅಂತ ಹೇಳಿದ್ದಳು, ಅದಕ ನಾ ನಿಮಗ ಈ ಮಾತು ಹೇಳಲಿಲ್ಲ. ಬೇಕಾರ ಈಗ ಆಕಿನ್ನ ನನ್ನ ಹುಜುರ ಕರಿಸಿ ಕೇಳರಿ. ನಾ ಏನು ಚಿಲ್ಲರ ಮನಷ್ಯಾ ಅಲ್ಲ. ಮಂದಿ ಹೇಳಿದ ಕೆಲಸ ಬೊಬ್ಬಾಟಾ ಮಾಡದ ಮಾಡತಿದ್ದೆ, ಮಾಡತೇನಿ. ಎಲ್ಲಾರಿಗೂ ಉಪಯೋಗ ಬೀಳತಾ ಇದ್ದೇನಿ. ಆದರ ಅದರ ಉಪಕಾರ ಹೀಂಗ ತೀರಿಸತೀರ ಎಂಬ ಕಲ್ಪನೆ ನನಗೆ ಬರಲಿಲ್ಲಿ. ನನಗೇನು ಊರ ಕೆಲಸ ಮಾಡೊ ಅವಶ್ಯಕತೆ ಇಲ್ಲ. ಸಾಲಿ ಅಷ್ಟ ನೋಡಿಕೊಂಡು ನಾ ಇರಬಹುದು. ಹುಡುಗರಿಗೆ ನ್ಯಾಕ ಅಕ್ಷರ ಕಲಿಸಿದರ ಸಾಕು." ನಾನು ಭಡಭಡ ನಿಷ್ಠುರ ಮಾತು ಆಡಿದೆ. ಮುದುಕ ಸ್ವಲ್ಪ ಗೊಂದಲದಾಗ ಬಿದ್ದ.

"ನನಗ ಅದೆಲ್ಲ ನಿಜ ಅನಿಸಿ ನಾ ಏನು ನಿನಗ ಮಾತಾಡಿದನೇನು? ನಿನಗ ನಾ ಏನಾರ ಮಾಡೇನೇನು? ನನಗ ಅದು ನಿಜ ಅನಿಸಲಿಲ್ಲ; ಈಗ ಅನಕಾ ನೀನು ಬಿಚ್ಚ ಮನಸಿನಿಂದ ಆದ ಮಾತನ್ನ ಹೇಳೀದಿ. ಬಾಲಟ್ಯಾ ನಿನ್ನ ಕೇಡ ಬಯಸತಾನ. ಅದಕ ಅವ ಕಡ್ಡಿ ಇದ್ದದ್ದರ ಗುಡ್ಡ ಮಾಡಿ ಹೇಳಿದ, ಇರಲಿ, ನಿನ್ನ ಮನಸಿನ್ಯಾಗ ಪಾಪ ಇಲ್ಲ ಅಲ್ಲ?"

ನಾನು ನನ್ನ ಸೊಕ್ಕಿನಾಗ ಇದ್ದೆ. ಅದರಾಗ ಮುದಕನ ಮಾತಿನ ಮ್ಯಾಲಿಂದ ಅವನ ಪಕ್ಷ ತಪ್ಪಿತ್ತು ಎಂಬುದು ಮಾರಿಮ್ಯಾಲೇ ಕಾಣತಿತ್ತು. ನನಗ ಮತ್ತಿಷ್ಟು ತ್ವೇಷವೆನಿಸಿ, ನಾ ಅಂದೆ,

"ಇನ್ನೂ ಕೇಳು ಪಾಪ ಅದ ಇಲ್ಲೊ ಅಂತ! ಚಲೊ ಮನಷ್ಯಾರು ನಿಮ್ಮ ಊರಾಗ ಇರೋದ ಪಾಪ, ಚಲೊ ಚಲೊ ಜನರನ್ನ ನೀವು ಕತ್ತೀ ಮಾಡಿ ಕೂಡಸಾವರು. ಆದಷ್ಟೊ ನೋಕರಿ ಸಾಕಾಯಿತು. ಅರ್ಜಿ ಮಾಡಿ ಇನ್ನೊಂದು ಊರಿಗೆ ಹೋಗತೇನಿ."

ಇಷ್ಟು ಕೊನೆಯ ಮಾತು ಆಡಿ ನಾ ಮ್ಯಾಲೆ ಬಂದೆ, ಅರವಿ ಹಾಕ್ಕೊಂಡು ಮನಿಗೆ ಬಂದೆ. ಮುದಕ ಹಾಂಗ ಅಲ್ಲೇ ಎಷ್ಟೊತ್ತು ಕೂತ ತಿಳಿಯಲಿಲ್ಲ.

ಇಡೀ ದಿನ ಸಿಟ್ಟಿನ ಭರದಾಗ ಇದ್ದೆ. ಬಾಲಟ್ಯಾನ ಮ್ಯಾಲೆ ಹ್ಯಾಂಗ ಸೇಡ ತೀರಿಸಿಕೊಳ್ಳಲಿ ಎಂಬ ವಿಚಾರ ನನ್ನ ಬಿಡವಲ್ಲದು. ಊರಾಗ ಹಿಡಿದ ಥಳಸಲ್ಯಾ ಅಂತ ಅನಿಸಿತು. ಆದರ ನನ್ನಲ್ಲಿ ಅಷ್ಟು ಕಸುವಿರಲಿಲ್ಲ. ಏನಾರ ಒಂದು ಸುಳ್ಳ ಪ್ರಕರಣ ಎಬಿಸಿ ಅವನ್ನ ಜೇಲಿಗೆ ಕಳಿಸಲೇನು ಅಂತ ಅನಿಸಿತು. ಏನು, ಫೌಜದಾರಗ ಹೇಳಿ ನಾಲ್ಕೇಟು ಹೊಡಿಸಿ ಬೆದರಿಸಲಿ ಅಂತ ಅನಿಸಿತು. ಆದರೆ ನಾನರ ಸೋತವನಿದ್ದೆ.

ನನ್ನ ಮನಸಿನ್ಯಾಗ ಹೊಯ್ದಾಟ ಆಯುಬೂ ತಿಳಕೊಂಡ. ಏನಾಗಿರಬೇಕು ಅದರ ನೆಲಿ ಅವಗ ಹತ್ತವಲ್ಲದು, ನನಗ ಎದುರಾ ಎದುರಾ ಕೇಳೂ ಧೈರ್ಯ ಅವನಲ್ಲಿರಲಿಲ್ಲ. ತಾನಾಗಿ ಏನೂ ಕೇಳಲೂ ಇಲ್ಲ. ರಾತ್ರಿ ಅಡ್ಡಾದಮ್ಯಾಲೆ ನಾನ ಆಯುಬೂಗ ಅಂದೆ,

"ಆಯುಬೂ, ಬಾಲಟ್ಯಾ ನನ್ನ ಹೆಸರ ಕೆಡಿಸ್ಯಾನ."

"ಮಾಸ್ತರ ಅವಗ ಒಮ್ಮೆ ಛಲೊ ಪಾಠ ಕಲಿಸು."

"ಅದನ್ನ ಕಲಿಸೊದು ಏನು ಕಠಿಣ ಮಾತಲ್ಲ. ಆದರ ಇಡೀ ದೈವ ನನ್ನ ವಿರುದ್ಧ ಆದೀತು. ಇವತ್ತಿನ ತನಕ ಚಲೊ ಬಾಳುವೆ ಮಾಡೇನಿ. ಯಾರ ಕಡಿಂದನೂ ಅನಿಸಿಕೊಂಡಿಲ್ಲ."

ಆಯುಬೂ ನನ್ನ ಮಾತು ಒಪ್ಪಿಕೊಂಡ. ತಿಳಿಸಿಹೇಳಿದರ ಅವಗ ಎಲ್ಲ ತಿಳಿಯುತಿತ್ತು. ಅವನ ಮಾರಿ ನೋಡಿದರ ಹಾಂಗ ಅನಿಸತಿತ್ತು. ಹಾಂಗ ಹೇಳಿನೂ ಹೇಳತಿದ್ದ.

"ಇವತ್ತ ಏನ ಮಾಡ್ಯಾನ ಅವ ನಿಮಗ, ಮಾಸ್ತರ?".

"ಜಗಳ ಹಚ್ಚೊದರ ಹೊರ್ತು ಮತ್ತೇನ ಮಾಡಾವ ಅವ. ಕಾರಭಾರಿ ನನ್ನ ಕೂಡ ಮಾತ ಬಿಡಲಿಕ್ಕೆ ಬಾಲಟ್ಯಾನ ಕಾರಣ."

"ನಿಮಗ ಇದನ್ನ ಮೊದಲ ಹೇಳಿದ್ದೆ."

"ಇಷ್ಟ ಅಲ್ಲ, ಅಂಜೇದೂ ನನ್ನದೂ ಸಂಬಂಧ ಅದ ಅಂತನೂ ಮುದಕಗ ಹೇಳ್ಯಾನ ಈ ಬಾಲಟ್ಯಾ."

ಅನಪೇಕ್ಷಿತವಾದ ಈ ಸುದ್ದಿ ಕೇಳಿ ಆಯುಬೂನ ಬಾಯಾಗಿಂದ ಕೆಟ್ಟ ಬೈಗಳ ಹೊರಬಿತ್ತು. ನನ್ನ ವಿಷಯ ಮತ್ತೇನಾದರೂ ಹೇಳಿದ್ದಾನು, ಆದರ ಅಂಜೇ ಸಂಬಂಧ ಜೋಡಿಸಿ, ಬಾಲಟ್ಯಾ ಕಾರಭಾರಿಗೆ ಸುಳ್ಳ ಹೇಳ್ಯಾನಂತ ಕೇಳಿ ಅವನಿಗೆ ಆಶ್ಚರ್ಯವಾಯಿತು. ಅವನಿಗೆ ಸಿಟ್ಟುಬಂದು ಅಂದನು,

"ಬಾಲಟ್ಯಾ ಇಷ್ಟ ಉದ್ದ ನಿರೀಗೆ ಹೋಗ್ಯಾನಂತನಿಸಿದ್ದಿಲ್ಲ."

"ಈ ಊರಾಗ ನನ್ನ ಕೇಡು ಬಯಸುವವರ್‍ಯಾರಿಲ್ಲ. ಆದರ ಯಾಕೋ ಏನೋ ಮೊದಲನೆ ಭೆಟ್ಟಿಯಿಂದನ, ಬಾಲಟ್ಯಾ ನನ್ನ ವಿಷಯದಲ್ಲಿ ಹಾವಿನ್ಯಾಂಗ ಡಂಕುಹಿಡಿದಾನ. ಏನ ಮಾಡಬೇಕು ಅದ ತಿಳಿಯುವದಿಲ್ಲ. ಇದುರುನಿಂತ ಏನೂ ಮಾಡುವದಿಲ್ಲ. ಹಿಂದ ಉಳಿದ ಕಿತಬಿ ಮಾಡತಾನ" ನಾ ಅಂದೆ. ಹೇಳತಾ ಹೇಳತಾ, ಬಾಲಟ್ಯಾ

ನನ್ನ ಕೋಣೆಗೆ ಬಂದು ನನಗ ಬೆದರಿಸಿದ್ದರ ನೆನಪಾಯಿತು. ಅಂಜೀ ಪ್ರಕರಣ ಎಬ್ಬಿಸಿ ನನ್ನ ಹೊಡಿಸಬೇಕು ಅಂತ ಹೊಂಚು ಹಾಕಿರಬೇಕು. ನನಗ ಬಹಳ ಹೊತ್ತು ನಿದ್ದಿ ಬರಲಿಲ್ಲ. ಆಯಬೂ ಡುರಕಿ ಹೊಡೆಯುತ್ತ ಮಲಗಿಕೊಂಡಿದ್ದ.

ಮೂರು ನಾಕ ದಿನ ಬಿಟ್ಟು ಚಾವಡ್ಯಾಗ ಬಹಳಹೊತ್ತು ಕೂತು ರಾತ್ರಿ ತಿರುಗಿ ಬಂದೆ. ಬಾಗಿಲ ತೆಗೆದಾಗ ಅಲ್ಲಿ ಆಯಬೂ ಮಲಗಿದ್ದ. ಕಡ್ಡಿಕೆರೆದು ಹಾಸಗಿ ನೋಡಿ ಅಡ್ಡಾದೆ.

ಮೊದಲನೆ ನಿದ್ದಿ ಆಗೋದರೊಳಗೆ ಹೊರಗೆ ಗದ್ದಲ ಕೇಳಿಸಿತು. ಅದರಿಂದ ಎಚ್ಚರಾದೆ. ಮೊದಲು ಗದ್ದಲದ ಅರ್ಥವಾಗಲಿಲ್ಲ. ಚಾವಡಿ ಹತ್ತರ ನಡೆದಿರ ಬೇಕೆಂದೆನಿಸಿತು.

ಕತ್ತಲದಾಗ ಕಿವಿಗೊಟ್ಟು ಕೇಳಿದೆ. ಆದರ ಬರೀ ಗದ್ದಲಷ್ಟೆ ಕೇಳಿಸಿತು. ತೋಳ ಇಲ್ಲದರ ಹಾವು ಬಂದಿರಬೇಕು. ಆಯಬೂನ ಎಬ್ಬಿಸಿ ಅವ ಏನ ಅಂತಾನ ತಿಳಿಕೊ ಬೇಕು ಅಂತ ಅಂದೆ,

"ಆಯಬೂ, ಏನ ಗದ್ದಲ ನಡದದೋ?"

ಆಯಬೂ ಲಗು ಏಳವಲ್ಲ. ನಾ ಅವನ್ನ ಅಗಳಾಡಿಸಿದೆ. ಅವ ಬೆದರಿ ಎದ್ದು ಕೂತು, "ಏನು ಏನು?" ಅಂತ ಕೇಳಲಿಕ್ಕೆ ಹತ್ತಿದ. ಎಚ್ಚರಾದ ಮ್ಯಾಲೆ ನಾ ಕೇಳಿದೆ,

"ನಿನಗ ಗದ್ದಲೇನಾದರ ಕೇಳಸತದೇನು? ಚಾವಡಿ ಮುಂದ ಜನ ಕೂಡಿದ್ಹಾಂಗ ಕಾಣತದ."

ಅವನೂ ಕಿವಿಗೊಟ್ಟು ಕೇಳಿದ.

"ಹೌದು ಚಾವಡಿ ಮುಂದ ಇರಬೇಕು. ಹೋಗಿ ನೋಡಿ ಬರಲಿ ಏನು?"

"ನಡಿ, ನಾನೂ ಬರತೇನಿ."

ಮೈತುಂಬ ಹೊತಗೊಂಡು ನಾವಿಬ್ಬರೂ ಹೊರಬಿದ್ದೆವು. ಹೊರಗ ಕತ್ತಲ ಇತ್ತು, ಆದರ ಪರಿಚಯದ ದಾರಿ ಇದ್ದದ್ದರಿಂದ ಲಗು ಹೋದೆವು. ಚಾವಡಿ ಮುಟ್ಟಿದಿವಿ.

ಮೊದಲ ಭೆಟ್ಟಿ ಆದಾವಗ ಕೇಳಿದಿವಿ,

"ಏನು ಗದ್ದಲ?"

"ದಾದೂ ಬಾಲಟ್ಯಾಗ ಹೊಡೆದಾರ" ಅಂತ ಹೇಳಿದ.

"ಯಾರು?"

"ಕತ್ತಲದಾಗ ಯಾರನ್ನೋದು ಗೊತ್ತಾಗಲಿಲ್ಲ."

ನಾನೂ ಗದ್ದಲದಾಗ ಸೇರಿದೆ. ದೀಪಾ ತಗೊಂಡ ಬಾಲಟ್ಯಾನ ಮುದಕಿ 'ಅಯ್ಯ ಅವ್ವ ಇನ್ನೇನು ಮಾಡಲಿ" ಎಂದು ಚೀರುತಿದ್ದಳು. ದಾದೂ ಬಾಲಟ್ಯಾ

ಧೂಳ್ಯಾಗ ಅಂಗಾತ ಬಿದ್ದಿದ್ದ. ಅವ ಮೆತ್ತಗಾಗಿದ್ದ, ಅಂಗಿ ಹರದಿತ್ತು, ಪಟಕಾ ದೂರ ಬಿದ್ದಿತ್ತು. ತೆರಪಿಲ್ಲದ ಹೊಡಿಸಿಕೊಂಡ ನಾಯಿಹಾಂಗ, ಬಾಲಟ್ಯಾ ನಾಲಿಗಿ ಹೊರಗ ತಗದು, ಉಸಿರಾಡಿಕೂತ ಬಿದ್ದಿದ್ದ. ರಾಮಾ ಬನಗರ, ಕಾರಭಾರಿ ತುದಿಗುಂಡಿ ಮ್ಯಾಲೆ ಕೂತಿದ್ದರು. ಅವರು ಅನ್ನತಿದ್ದರು,

"ಬಾಲಟ್ಯಾ, ಎದ್ದಕೂಡು. ಏನ ಆಗ್ಯದ? ಯಾರು ಹೊಡೆದರು?

ಬಾಲಟ್ಯಾ ಕಣ್ಣಮುಚ್ಚಿ, ಗೋಣ ಅಗಳಾಡಿಸತಿದ್ದ. ಅವಗ ಏಳಲಿಕ್ಕೆ ಬರತಿದ್ದಿಲ್ಲ. ಮಾತಾಡಲಿಕ್ಕೂ ಬರತಿದ್ದಿಲ್ಲ. ನಾ ಅಂದೆ,

"ಹೀಂಗ ಮಣ್ಣಾಗ ಏನ ಒಗದಿರಿ ಅವಗ? ಮನಿಗಾರ ತಗೊಂಡು ನಡಿರಿ."

ಎಲ್ಲರೂ ನನ್ನ ಮಾತು ಕೇಳಿದರು. ಆದರೆ ಅವನ್ನ ಹೊತಗೊಂಡು ಹೋಗಲಿಕ್ಕೆ ಒಬ್ಬರೂ ಮುಂದ ಬರಲಿಲ್ಲ. ಆನಂದಾ ಮಾತ್ರ ಮುಂದ ಬಂದು, ಸತ್ತಕುರಿ ಎತ ಗೊಂಡು ಹೋಗೊ ಹಾಂಗ, ಬಾಲಟ್ಯಾನ ಅಮಾತ ಎತ್ತಿ ಮನಿಕಡಿಗೆ ಸಾಗಿಸಿದ.

ಮನೆಗೆ ಒಯ್ದು ಬಾಲಟ್ಯಾನ್ನ ಕಂಬಳಿಮ್ಯಾಲೆ ಮಲಗಿಸಿದರು. ಅವನ ಹೆಂಡತಿ ಒಂದಸವನ ಅಳತಿದ್ದಳು. ಆಕಿಮ್ಯಾಲೆ ಸಿಟ್ಟಿಗೆದ್ದು ಕಾರಭಾರಿ ಅಂದ,

"ಏ ಸುಂದ್ರಾ ಸುಮ್ಮನಿರು, ಏನಾರ ತಿಳಿತೈತಿ ಇಲ್ಲೊ? ಹೀಂಗ ಅಳಾಕ ಅವ ಸತ್ತಾನೇನು?"

ಮನಿ ಹೊರಗ ಜನರ ಗದ್ದಲ. ಬಾಲಟ್ಯಾನ ಮಾರಿಗೆ ನೀರು ಹೊಡೆದರು, ಅವಗ ಗಾಳಿಹಾಕಿದರು, ಆಗ ದಮ್ಮ ಕಡಿಮೆಯಾಗಿ ಕಣ್ಣತೆರೆದು ಅತ್ತಿತ್ತ ನೋಡಿದ,

"ಗುರ್ತಾ ಹಿಡಿದೇನು?" ಅಂತ, ನಾ ಕೇಳಿದೆ.

ಅವ ಮಾರಿ ಅತ್ಲಾಗ ಹೊರಳಿಸಿದ. ಅವನ ಮಾರಿಹತ್ತರ ಹೋಗಿ ಕಾರಭಾರಿ ಕೇಳಿದ,

"ಬಾಲಟ್ಯಾ, ಎಚ್ಚರಾದಿ? ನಾ ಯಾರು?"

ದಾದೂ ಉಗಳ ನುಂಗಿದ, ಕಾರಭಾರಿ ಅವನ ಕೈ ಗಟ್ಟಿ ಹಿಡಿದು ಅಂದ,

"ಅಂಜಬೇಡ, ನಿನಗೇನೂ ಆಗೊದಿಲ್ಲ."

ಇಷ್ಟಂದು ಮುದಕ ಅವನ ಕೈಕಾಲು ಒತ್ತಿದ. ಅಷ್ಟರಾಗ ಯಾರೋ ಅಂದರು,

"ಸತ್ತೆ, ಅಯ್ಯೋ ಸತ್ತೆ......ಯಾರೊ ಹೊಡಿತಾರ......" ಅಂತ ಒದರಿದ. ದನಿ ಕೇಳಿ ನಾ ಮನ್ಯಾಗಿಂದ ಹೊರಬಿದ್ದು ಓಡಿದೆ. ಕತ್ತಲಾಗ ಏನೂ ಕಾಣತಿದ್ದಿಲ್ಲ. ಮುಂದ ಹೋಗಿ ನೋಡಿದರ ಮಣ್ಣಾಗ ನೆಳಕೊತ ಯಾವನೋ ಉರಳಾಡತಿದ್ದ. ನಾ ಕೇಳಿದೆ "ಯಾರವರು, ಏನಾಗ್ಯೆತಿ?" ಆಗ ಬಿದ್ದಾವ "ನಾ ಬಾಲಟ್ಯಾ—ನನಗ ಹೊಡೆದಾರ" ಅಂದ.

ರಾಮಾ ಅಂದ, "ಅದೆಲ್ಲ ಖರೆ. ಆದರ ಯಾರ ಹೊಡೆದರು, ಯಾಕ ಹೊಡೆದರು ಗೊತ್ತೈತೇನು. ಬರೀ ಹೊಡೆದಾರ ಅಂತ ಅಂದರೇನು?"

ಇವನ್ನೆಲ್ಲ ಹೇಳಿದವ ಅಂದ, "ದೇವರಿಗೆ ಗೊತ್ತು. ಅವ ಮುಂದೇನು ಮಾತಾಡಲೇ ಇಲ್ಲ. ಅದಕ್ಕ ಹ್ಯಾಂಗ ತಿಳಿಯಬೇಕು?"

"ಯಾರಾರ ಓಡಿಹೋಗೋದು. ಅಡಗೋದು ನೋಡಿದಿ ಏನು?"

"ನಮ್ಮ ಅಪ್ಪನ ಆಣೆ, ಸುಳ್ಳ್ಯಾಕ ಹೇಳಲಿ?"

ಹೊರಗಿನವ ಒಬ್ಬವ ಬೊಗಳಿದ, "ಇದೆಲ್ಲ ಭಾನಾಮತಿ ಆಟ ಐತಿ, ಮಂತ್ರ ಹಾಕಾವನ್ನ ಕರಕೊಂಡ ಬರ್ರಿ. ಗೌಡರ ಹಟ್ಟಿಗೆ ಹೋಗಿ ತರಕೊಂಡ ಬರ್ರಿ, ಅವ ಚಲೋ ಮಂತ್ರ ಹಾಕತಾನ."

ಆದರೆ ಯಾರೂ ಹೋಗಲಿಕ್ಕೆ ತಯಾರಿದ್ದಿಲ್ಲ. ನೀ ಹೋಗ, ನೀ ಹೋಗ ಅಂತ ಸುರುವಾಯಿತು. ಆಗ ನಾನು ಒದರಿ ಅಂದೆ,

"ಅವನ ದಣಿವು ನೋವು ಕಡಿಮೆಯಾಗಲಿ. ಒಂದು ಸ್ವಲ್ಪ ಎದ್ದುಕೂಡಲಿ ಅಂದರ ಎಲ್ಲ ತಿಳೀತದ."

ಕೋಳಿ ಕೂಗಿದವು, ನಸುಕು ಹರಿಯಿತು ಆದರೆ ಬಾಲಟ್ಯಾ ಎದ್ದು ಕೂಡಲಿಲ್ಲ. ಹೊರಗಿನ ಗದ್ದಲಾನೂ ಕಡಿಮೆಯಾಯಿತು, ನಾನು, ಕಾರಭಾರಿ, ಆಯುಬೂ, ರಾಮು ಮತ್ತ ಊರಾವರು ಇಬ್ಬರು ಇಷ್ಟು ಜನ ಉಳಿದೆವು. ಬೆಳಗಾದ ಮ್ಯಾಲೆ ಬಾಲಟ್ಯಾ. "ನೀರುSS" ಅಂದ. ಬಾಲಟ್ಯಾ ಕಣ್ಣುತೆಗೆದ. ಅವಗ ನೀರು ಚಹಾ ಕೊಟ್ಟರು. ಅವ ಹುಶಾರಿ ಆದ.

"ದಾದೂ, ಏನಾಯಿತು. ಆರಾಮ ಅನಿಸತದೇನು?" ಎಂದು ರಾಮು ಕೇಳಿದ.

"ಹೌದು" ಕ್ಷೀಣವಾದ ದನಿಯಲ್ಲಿ ಬಾಲಟ್ಯಾ ಅಂದ.

"ನಿನಗ್ಯಾರು ಹೊಡೆದರು?"

"ಹೊಡೆಯಾವರು ಕಾಣಲಿಲ್ಲ" ನಿಟ್ಟುಸಿರು ಬಿಟ್ಟು ಅಂದ.

"ಎಷ್ಟು ಮಂದಿ ಇದ್ದರು?"

"ಅದೂ ತಿಳಿಯಲಿಲ್ಲ. ಕತ್ತಲಾಗ ಮೈಮೇಲೆ ಒಮ್ಮಿಲೆ ಕಂಬಳಿ ಒಗೆದರು, ಬಾಯಾಗ ಅರವಿ ತುರಕಿದರು ಮತ್ತ ದನಾ ಬಡದ್ಹಾಂಗ ಬಡದ ಬಡದರು, ಸೂಳಿ ಮಕ್ಕಳು !"

"ನಿನ್ನ ಸಂಶಯ ಯಾರ ಮ್ಯಾಲೈತಿ?"

ಇಲ್ಲ ಅಂತ ಗೋಣ ಅಗಳಾಡಿಸಿ ನನ್ನ ಕಡೆ ನೋಡಿದ.

ಬೆಳಗಾಗಿ ಈಗ ಬಿಸಿಲು ಮೇಲಕ್ಕೇರಿತ್ತು. "ಆರಾಮ ಮಾಡು" ಅಂತಾ ಹೇಳಿ ಕಾರಭಾರಿ ಎದ್ದ, ಅವನ ಹಿಂದ ನಾವೂ ಎದ್ದು ಹೊರಬಿದ್ದಿವಿ.

"ಈ ಸೂಳೆಮಗನವು ಇಷ್ಟತ್ತ ಭಾನಗಡಿ. ಎರಡನೆ ಊರವರು ಬಂದು ಥಳಿಸಿದ್ದಾರು. ಅದ್ಯಾಂಗ ಗೊತ್ತಾಗಬೇಕು?" ಅಂತ ರಾಮು ಅಂದ.

"ಯಾರ ಹೊಡೆದಾರ ಅನ್ನೋದು ಅವಗ ಪಕ್ಕಾ ಗೊತ್ತೈತಿ! ಆದರ ಅವ ಹೇಳುವಲ್ಲ" ಆಯುಬೂ ಅಂದ.

"ಕಳ್ಳನ ಹೆಜ್ಜೆ ಕಳ್ಳಗ ಗೊತ್ತು. ಅವಗ ಎಲ್ಲ ಗೊತ್ತದ. ಇರಲಿ, ಹೊಡತದ ಮ್ಯಾಲೆ ಬಿಟ್ಟಾರ, ಜೀವ ತಗೊಂಡಿಲ್ಲ, ಅಷ್ಟೆ ಸೈ" ಅಂದ.

ಮನಿಗೆ ಬಂದೆ. ನಾ ಆಯಬೂಗ ಅಂದೆ,

"ಆಯುಬೂ, ಬಾಲಟ್ಯಾಗ ನನಗ ನೆಟ್ಟಗಿಲ್ಲ. ನನ್ನ ಮ್ಯಾಲೆ ಅವ ಸಂಶಯ ತಗೊಂಡರ?"

ಆಯುಬೂ ತುಚ್ಛತೆಯಿಂದ ಅಂದ,

"ಈ ಹೇಡಿ ಏನಮಾಡೀತು? ಆರ ತಿಂಗಳ ಹಾಸಗಿ ಬಿಡೊಹಾಂಗಿಲ್ಲ!" ಆದದ್ದು ಹಾಗೇ ಆಯಿತು. ಹತ್ತಿಪ್ಪತ್ತು ದಿನ ಹೋದರೂ ಅವಗ ಅಡ್ಯಾಡಲಿಕ್ಕೆ ಬರತಿದ್ದಿಲ್ಲ, ಬರೋ ಲಕ್ಷಣನೂ ಇದ್ದಿಲ್ಲ. ಹಾಸಿಗ್ಯಾಗ ಬಿದ್ದು ನೆರಳತಿದ್ದ. ಯಾರ ಹೋದರೂ ಮಾತಿದ್ದಿಲ್ಲ. ಊರವರು ಅಂದರು, ಬಾಲಟ್ಯಾಗ ದೆವ್ವ ಬಡೀತು. ಇನ್ನ ಅವ ಉಳಿಯೋದಿಲ್ಲ.

## ೧೪

ಈ ಸಣ್ಣ ಹಳ್ಳ್ಯಾಗ ಒಂದು ಗಟ್ಟಿಯಾದ ಕಟ್ಟಡ ಬೇಕು ಎಂಬ ವಿಚಾರ, ಒಂದು ದಿನ ಸಹಜ ನನಗ ಹೊಳೆಯಿತು. ಹೌದು, ಇರಬೇಕು ಆದರೆ? ಊರವರ ತಮ್ಮ ದುಡ್ಡಿನಿಂದ ಅದನ್ನು ಕಟ್ಟಿಸಬೇಕು. ಅದಕ್ಕ ಬರೋ ಖರ್ಚು ಮಾಡಲಿಕ್ಕೆ ಈ ಹುಚ್ಚ ಕುರುಬರು ಒಪ್ಪುವರೇ? "ಕುರುಬರ ಹುಚ್ಚು ಆರು ತಿಂಗಳನೂ ಹೋಗುದಿಲ್ಲ" ಅಂತ ಒಂದು ಗಾದೆ ಮಾತಿದೆ. ಅದು ಕುರುಬರ ಹಟಹಿಡಿಯೊ ಮನೊವೃತ್ತಿ ಕಂಡುಬಂದಿರ ಬೇಕು. ಊರಾಗ ಒಂದು ಕಟ್ಟಡ ಬೇಕು ಅಂತ ಅಂದರ ಯಾರೂ ಒಪ್ಪತಿದ್ದಿಲ್ಲ. ಸಾಲಿಗೆ ಕಟ್ಟಡಬೇಕು ಅಂತರ ಸಾಲಿ ಕಟ್ಟಡ ಇದ್ದ ಇತ್ತು ಮತ್ತು ಇನ್ನೂ ಅನೇಕ ವರ್ಷ ಸ್ಥಳ ಕಡಿಮೆ ಬೀಳುವ ಸಂಭವವೂ ಇದ್ದಿಲ್ಲ. ಹಾಂಗಾರ ಕಟ್ಟಡ ಎಂಥದಿರಬೇಕು? ಸಹಜ ವಿಚಾರ ಮಾಡತ ಗರಡಿಮನಿ ಇರಬೇಕು ಅಂತ ಹೊಳಿತು. ಹುಡುಗರಿಗೆ ಆಟಕ್ಕ, ದೊಡ್ಡವರಿಗೆ ಒಂದು ಕಡೆ ಕೂಡಲಿಕ್ಕೆ ಒಂದು ದೊಡ್ಡದಾದ ಗರಡಿಮನಿ ಕಟ್ಟಡಬೇಕು. ಅದರಾಗ ನಮ್ಮ ಸಂಸ್ಥಾನದ ಅರಸಗ ವ್ಯಾಯಾಮದ ಹುಚ್ಚು: ಅವರಲ್ಲಿ ವಿಶೇಷ ಆಸ್ಥೆ ಆದ್ದರಿಂದ ಕಟ್ಟಡಕ್ಕೆ ಸರಕಾರಿ ಸಹಾಯ ಸಿಗುವ ಸಂಭವವಿತ್ತು ಅಥವಾ ಖಾಸಗಿ ನಿಧಿಯಿಂದ ದೊರೆಯುಬಹುದಾಗಿತ್ತು. ನಾ ಒಮ್ಮೆ ಈ ಊರಾಗ ಮಾಸ್ತರ ಇದ್ದೆ, ಅನ್ನುವ ನೆನಪು ಉಳಿಯುವಂತಿತ್ತು.

ರಾಮೋಶಿಗೆ ಹೇಳಿ ರಾತ್ರಿ ಊರವರನ್ನೆಲ್ಲರನ್ನು ಕರಿಸಿಕೊಂಡೆ. ರೊಟ್ಟಿ ತಿಂದು, ಬಾಯತುಂಬ ತಂಬಾಕ ಹಾಕಿ ಕಂಬಳಿ ಹೊತಗೊಂಡು ಸಾಲಿ ಬೈಲಿನ್ಯಾಗ ಎಲ್ಲರೂ ಬಂದು ಕೂತರು. ಕಾರಭಾರಿನೂ ಬಂದಿದ್ದ. ರಾಮಾ ಬನಗರ ಇದ್ದ, ಶೇಕು ಇದ್ದ, ತಾತೂಬಾನೂ ಬಂದಿದ್ದ. ಅಡವ್ಯಾಗ ಏನೂ ಕೆಲಸ ಇದಿಲ್ಲ, ಅಂತ ಎಲ್ಲರೂ ಬಂದಿದ್ದರು. ಮೊದಲ ಅತಲಾಗಿನ ಇತಲಾಗಿನ ಮಾತಾದವು. ಬಾಲಟ್ಯಾ ನೆಟ್ಟಗಾಗಿದ್ದಿಲ್ಲ, ಮೈ ನುಗ್ಗಾಗಿ ನೋವಾಗತದೆಂದು ತಿಳಿತು. ಹಾಸಿಗೆ ಬಿಟ್ಟು ಇನ್ನೂ ಏಳುತ್ತಿದ್ದಿಲ್ಲ. ಅವಗ ಫಿರ್ಯಾದಿ ಮಾಡ ಅಂತ ಹೇಳಿದರು. ಆಗ ಅವ ಅಂದ,

"ಫಿರ್ಯಾದಿ ಮಾಡಿ ಹೊಡದವರು ಸಿಕ್ಕರೂ, ನನಗ ಹೊಡದದ್ದ ಏನಾರ ಹೋಗತದೇನು?"

ಒಂದು ರೀತಿ ಇದೂ ನಿಜವಾದ ಮಾತೇ ಆಗಿತ್ತು. ಆ ಮ್ಯಾಲೆ ನಾ ಜನರನ್ನು ಕರಿಸಿದ ಉದ್ದೇಶವನ್ನು ಹೇಳಿದೆ. ನಾ ಅಂದೆ,

"ಈ ಊರಾಗ ಒಂದು ದೊಡ್ಡ ಕಟ್ಟಡ ಇರಬೇಕಂತ ಅನಸಿತದ. ಅದು ಹೀಗಿದ್ದ ನಮ್ಮ ನಿಮ್ಮ ಮನೆಗಳಿಗಿಂತ ಗಟ್ಟಿಯಾಗಿರಬೇಕು. ಇಲ್ಲೆ ದಿನಾ ನಾವು ನೀವು ಧೂಳಾಗ

ಕೂಡತೇವಿ. ಚಳಿ ಇದ್ದಾಗ ಹೊರಗ ಕೂಡೊದ ಆಗುಂದಿಲ್ಲ ಅಂತ ಕೂಡುಂದಿಲ್ಲ. ಯಾರಾರ ಸಾಲಿ ಅಧಿಕಾರಿ ಅಥವಾ ಫೌಜದಾರರು ಬಂದರು ಇರಲಿಕ್ಕೆ ಜಾಗಾ ಇಲ್ಲ. ಹೊಲಗೆರ್‍ಯಾಗೂ ಪಕ್ಕಾ ಇಮಾರತ ಇರತಾದ, ಹಾಂಗಾರ ನಮ್ಮೂರಾಗ ಯಾಕಿರ ಬಾರದು ? ಒಂದು ದೊಡ್ಡ ಗರಡಿಮನಿ ಊರಾಗ ಇರಬೇಕು ಅಂತ ನನಗ ಅನಸತದ. ನಿಮ್ಮ ಅಭಿಪ್ರಾಯ ಏನಾದ ಹೇಳರಿ."

ಕೂಡಿದ ಜನರಲ್ಲಿ ಗುಜುಗುಜು ನಡೆಯಿತು. ಮಾಸ್ತರಗ ಏನೋ ಹುಚ್ಚು ಹಿಡದದಂತ ಅವರು ತಿಳಿದಿರಬೇಕು. ತಮ್ಮ ತಮ್ಮೊಳಗ ಮಾತಾಡೋದು ಕೇಳಿ ನಾ ಒದರಿ ಹೇಳಿದೆ, "ಹಾಂಗ ಬರೀ ಗುಜುಗುಜು ಮಾತಬ್ಯಾಡ. ನಾ ಹುಚ್ಚ ಇದ್ದೇನಿ ಅಂತ ನಿಮಗನಿಸದರ ಹಾಂಗ ಹೇಳರಿ. ಮಾತಾಡೋದು ಹೇಳೋದು ಬಿಚ್ಚ ಮನಸಿನಿಂದಾಗಲಿ. ಏನನ್ನೊದು ನನಗ ಹೇಳರಿ."

ಬಾಳಾ ಬನಗರ ಸಂಕೋಚ ಅನಿಸಕೋತ ಅಂದ,

"ಗರಡಿಮನಿ ಕಟ್ಟಾಕ ಈ ಊರಾಗ ಅವ ಯಾವ ಪೈಲವಾನ ಅದಾನ ?"

"ಸಾಲಿ ಸುರು ಆಗೋಮುಂದ ಹೀಂಗ ಅಂದರಿ. ಈ ಊರಾಗ ಹುಡುಗರು ಎಲ್ಲಿ ಅದಾವ ಅಂತ? ಆದರ ಈಗ ಹುಡುಗರು ಬರತಾವ ಅಲ್ಲ. ಮುಂದ ತಾಲುಕಾಕ್ಕೊನೂ ನಾಕೆಂಟು ಹುಡುಗರು ಹೋಗಬಹುದು. ಯೋಳನೆ ಯತ್ತಾ ಪಾಸೂ ಆದಾವು."

"ಏನ ಪಾಸ ಆಗತಾವ ? ಸ್ವಲ್ಪ ದೊಡ್ಡವರಾದ ಕೂಡಲೆ ಕುರಿಹಿಂಡಿನ ಹಿಂದ ಹೋಗತಾವ. ಯೋಳನೆಯತ್ತಾ ಪಾಸಾಗಿ ಅವರಿಗೇನು ನಿನ್ಹಾಂಗ ಮಾಸ್ತರ ಆಗೋದೈತೇನು ? ನಮ್ಮ ಪೈಕಿ ಒಬ್ಬವನಾರ ಕಲ್ತು ಅಮಲದಾರ ಆಗ್ಯಾನೇನು ?"

ಕಾರಭಾರಿ ಎಲ್ಲಾರಿಗೂ ಎಚ್ಚರಕೊಟ್ಟು ಅಂದ,

"ಏ, ಇವತ್ತ ಪೈಲವಾನ ಯಾರೂ ಇರಲಿಕ್ಕಿಲ್ಲ. ಆದರ ನಮ್ಮ ಹುಡುಗರ ಆಡಾತವ. ಆಡ ಆಡತಾ ಅವರೊಳಗ ಯಾರಾರ ತಯಾರಾಗಿ ಅವನ್ನ ಪೈಲವಾನ ಅಂತ ಆರಸಬಹುದು."

"ಒಂದು ವ್ಯಾಳ್ಯೆ ಯಾರನ್ನೂ ಆರಸಲಿಲ್ಲ ಅಂತಾ ತಿಳೀರಿ. ಕಟ್ಟಡ ಆದರ ಊರಿಗಾರ ಅದರ ಉಪಯೋಗವಾಗತದಲ್ಲ. ನೀವು ಗಜ್ಜಿಕುಣತಾ ಮಾಡತಿರಿ. ಅದಕ್ಕ ಬೇಕಾಗೊ ಸಾಧನ ಅತ್ತಿತ್ತ ಎಂಟ ದಿಕ್ಕಿಗೆ ಬಿದ್ದಾವ. ಒಂದುಕಡೆ ಢೋಲ ಇದ್ದರ, ಝೂಂಜ ಇನ್ನೊಂದು ಕಡೆಗೆ. ನಿಮ್ಮಲ್ಲಿ ಕೆಲವರು ದಾಂಡಪಟ್ಟಾ ಆಡಿದರ, ಇನ್ನೊಬ್ಬರು ಲೆಝಿಮ ಆಡತಾರ, ಮತ್ತೆ ಕೆಲವರು ಲಾಠಿ ಕಲಿತಾರ. ಈ ಎಲ್ಲ ಸಾಧನ ಒಂದುಕಡೆ ಇಟ್ಟರ – ಗರಡಿಮನ್ಯಾಗ ಇಟ್ಟರ ಎಲ್ಲಾರಿಗೂ ಅನುಕೂಲ. ಬಿಡುವಿನ ಕಾಲದಾಗ ಕುಣಿತ ಬರಾವ, ಲಾಠಿ ಬರಾವ ಉಳಿದ ಹುಡುಗರಿಗೆ ಅವನ್ನ ಕಲಿಸತಾನ; ಕಲಿಸಾಕ ಒಂದು ಜಾಗಾ. ಹಾಂಗಾದರ ತಪ್ಪೇನಾತು ?"

"ಅದೆಲ್ಲ ನಿಜ. ಆದರ ಇದಕ್ಕ ದುಡ್ಡು ಬೇಕಲ್ಲ. ಅದನ್ಹ್ಯಾಂಗ ತರೋದು ?"

"ಊರವರು ಪಟ್ಟಿ ಎತ್ತಬೇಕು. ಮನಿಗೆ ಇಪ್ಪತ್ತು ರೂಪಾಯಿ ಕೊಡರಿ !"

"ಅಷ್ಟ ರೊಕ್ಕ ಯಾರ ಕಡಿಗೆ ಅವ ?"

"ಎಲ್ಲಾರ ಕಡೆ ಅವ. ನನಗ ಗೊತ್ತದ. ಯಾರ ಕಡೆ ರೊಕ್ಕ ಇಲ್ಲ, ಅವರು ಶ್ರಮದಾನ ಮಾಡಲಿ. ತಮ್ಮ ಅಡವ್ಯಾಗಿನ ಗಿಡ ಕೊಡಲಿ, ಯತ್ತ ಚಕಡಿ ಕೊಡಲಿ. ದೈವ ಮನಸಮಾಡಿದರ ಹತ್ತು ಬಣದ್ದು ಗರಡಿಮನಿ ಆಗೊದಕ್ಕ ಏನ ತಡ ಇಲ್ಲ."

ನಾ ಹೇಳಿದ್ದು ಯಾರ ಮನಸಿಗೆ ಬಂದ್ಹಾಂಗ ಕಾಣಲಿಲ್ಲ. ಆದರ ನನ್ನ ವಿರುದ್ಧ ನಿಂತು ಮಾತಾಡೊ ಧೈರ್ಯ ಯಾರಲ್ಲಿ ಇರಲಿಲ್ಲ. ಕಟ್ಟಡ ಅರ್ಧಕ್ಕ ಉಳಿದು, ನಗೆಗಿಡಾಬಹುದೆಂಬ ಅಭಿಪ್ರಾಯವಿದ್ದಂತೆ ತೋರಿತು. ನಾನು ಸುಮ್ಮನಿರದೆ ಈ ಮಾತನ್ನು ಬಗೆಬಗೆಯಿಂದ ತಿಳಿಸಿ ಹೇಳಿದೆ, ಹೇಳತಾನ ಇದ್ದೆ.

ಇನ್ನೊಮ್ಮೆ, ಊರ ಹಿರಿಯರನ್ನು ಕೂಡಿಸಿ ಅವರೊಡನೆ ವಿಚಾರ ವಿನಿಮಯ ಮಾಡಿದೆ. ಅಲ್ಲಲ್ಲಿ ಜನರು ಕಟ್ಟಿದ ಸಾಲಿಕಟ್ಟಡದ ಉದಾಹರಣೆ ಹೇಳಿದೆ. ಆ ಊರ ಹೇಗೆ ಹೆಸರು ಪಡೆದು ಸರಕಾರಿ ಸಹಾಯ ಪಡೆದದ್ದನ್ನು ತಿಳಿಸಿಹೇಳಿದೆ. ಇಷ್ಟೆಲ್ಲ ಆದ ಮೇಲೆ ಊರ ಹಿರಿಯರು ಒಪ್ಪಿದರು.

ಹಿರಿಯರು ಒಪ್ಪಿದೊಡನೆ ಊರವರು ಒಪ್ಪಿದರು. ಎತ್ತು ಚಕಡಿ ಅವನ್ನು ಕೊಡಲೊಪ್ಪಿದರು, ಶ್ರಮದಾನ ಮಾಡಲು ಸಿದ್ಧರಾದರು. ನಾಲ್ಕಾರು ತಿಂಗಳಲ್ಲಿ ಕಟ್ಟಡ ಮುಗಿಸಿ. ರಾಜೆಸಾಹೇಬರನ್ನು ಉದ್ಘಾಟನ ಮಾಡಲು ಕರೆಸಬೇಕೆಂಬ ನಿರ್ಣಯ ವನ್ನೂ ಮಾಡಿ ಆಯಿತು. ಎಂದೂ ಬರದ ರಾಜಾ ಈ ಮಾಸ್ತರನ ಕರಾಮತಿಯಿಂದ. ಊರ ಒಕ್ಕಟ್ಟಿನಿಂದ ಕುರುಬರ ಊರಿಗೆ ಬರತಾನ ಅನ್ನುವ ಕಲ್ಪನೆಯು ಜನರನ್ನು ಉತ್ಸಾಹಗೊಳಿಸಿತು. ಊರಾಗ ಗರಡಿಮನಿ ಆಗತದ, ರಾಜಾ ಬರತಾನ ಅನ್ನೋದು ಮನಿಮಾತಾಯಿತು. ಹೇಳಿಕೊಳ್ಳುವಂಥ ಒಂದೂ ಘಟನೆ ಈ ಊರಲ್ಲಿ ಆಗಿರಲಿಲ್ಲ. ಅಂಥ ಒಂದು ಘಟನೆ ಈಗ ಆಗುವದರಲ್ಲಿತ್ತು. ಜನರು ಜಾಗ್ರತೆಯಿಂದ ತಮ್ಮ ಪಾಲಿನ ವರ್ಗಣಿಯನ್ನು ಕಾರಭಾರಿ ಕಡೆಗೆ ಕೊಡಹತ್ತಿದರು. ಸಹಾಯ ಧನಕ್ಕಾಗಿ ನಾನು ಸರಕಾರಕ್ಕೆ ಅರ್ಜಿಮಾಡಿದೆ. ಗೌಂಡೆರು ಬಡಿಗೇರರನ್ನು ಹುಡುಕಲಿಕ್ಕೆ ಸುರುಮಾಡಿದೆವು. ಇಂಥ ಕಸಬಗಾರರು ಹಳ್ಳ್ಯಾಗ ಸಿಗೋದು ದುಸ್ತರ. ಅವರು ಕೇಳಿದಷ್ಟು ಮಜೂರಿ (ಕೂಲಿಹಣ) ಕೊಡಲೊಪ್ಪಿ ಎರಡನೆ ಊರಿಂದ ಅವರನ್ನು ತರುವದಿತ್ತು. ಇಮಾರತಿ ಕಟಗಿಯ ಅವಶ್ಯಕತೆ ಇತ್ತು. ದೂರಿನ ಗುಡ್ಡದಾಗಿನ ಕಲ್ಲು ತರಬೇಕಾಗಿತ್ತು. ಅದಕ್ಕಾಗಿ ಅಲ್ಲೇ ಒಡ್ಡರನ್ನು ಕೂಡಿಸಿ ಅವನ್ನು ಒಡಿಸಬೇಕಾಗಿತ್ತು. ಒಡೆದ ಕಲ್ಲು ದಿಂಡು ಮಾಡಲು ಗೌಂಡೆರು ಬೇಕಾಗಿದ್ದರು. ಒಡೆದ ಕಲ್ಲು ಹೊತ್ತು ತಂದು ಹಾಕಲು ಚಕಡಿಗಳು

ಬೇಕಾಗಿದ್ದವು. 'ಮನಿ ಕಟ್ಟಿ ನೋಡು' ಅನ್ನುವ ಮಾತು ಸುಳ್ಳಲ್ಲ. ಒಂದೊಂದು ಸಣ್ಣಸಣ್ಣ ಮಾತಿಗಾಗಿ ಕೆಲಸ ನಿಲ್ಲುತಿತ್ತು. ಇದೆಲ್ಲ ಹೇಳುವುದೂ ಕಷ್ಟ.

ಬೇಕಾಗುವ ಮಾಲನ್ನೆಲ್ಲ ಕೂಡಿಸುವದು ಭರದಿಂದ ನಡೆಯಿತು. ಗರಡಿಮನಿ ಎಲ್ಲಿ ಕಟ್ಟಿಸಬೇಕು? ಜಾಗಾದ ವಿಚಾರ ನಡೀತು. ಊರಾಗ ಎಲ್ಯಾರ ಜಾಗಾ ಸಿಕ್ಕೀತೆಂದು ಯೋಚಿಸಿದ್ದೆ. ಆದರೆ ಪ್ರತ್ಯಕ್ಷ ನಿರೀಕ್ಷಣೆ ಮಾಡಿದಾಗ, ಈ ಮಾತು ಅಷ್ಟು ಸುಲಭವಲ್ಲವೆಂದು ಕಂಡುಬಂದಿತು. ಯಾವ ಸ್ಥಳವೂ ಯೋಗ್ಯವೆಂದೆನಿಸಲಿಲ್ಲ. ಅದರಾಗ ಎಲ್ಲರಿಗೂ ಅನುಕೂಲ ಒಂದು ಜಾಗಾ ನನ್ನ ನಜರಿಗೆ ಬಂದಿತು. ಆದರೆ ಆ ಜಾಗಾದಾಗ ನಾಲ್ಕು ಅಂಕಣದ ಒಂದು ಗೀಳಾದ ಮನಿ ಇತ್ತು. ಅದಕ್ಕ ಕೀಲಿ ಹಾಕಿತ್ತು. ಇದ ಜಾಗಾ ಯೋಗ್ಯವೆಂದು ನನ್ನ ಮನಸಿನ್ಯಾಗ ಗಟ್ಟಿಮಾಡಿಕೊಂಡು, ನಾನು ಈ ಮಾತನ್ನು ರಾತ್ರಿ ದೈವದಿದುರು ಇಟ್ಟೆ.

"ಹೌದು, ಜಾಗಾ ಆತು. ಯೋಗ್ಯನೂ ಇದ್ದೀತು, ಆದರ ಅದು ಬೇರೆಯವರದದ" ಕಾರಭಾರಿ ಹೇಳಿದ.

"ಯಾರ ಜಾಗಾ ಅದು?" ನಾ ಕೇಳಿದೆ,

"ಪರಊರ ಶೆಟ್ಟಿ ಒಬ್ಬವ ಇದ್ದ; ಅವ ಈ ಮನಿ ಕಟ್ಟಿ ಅಲ್ಲಿ ಇರತಿದ್ದ."

"ಈಗ ಅವ ಎಲ್ಲಿ ಇದ್ದಾನ? ಅವನಿಂದ ಖರೀದಿ ಒಡಿಯೋಣ." ನನ್ನ ಮಾತು ಕೇಳಿ ಎಲ್ಲರೂ ನಕ್ಕರು. ಒಬ್ಬವ ಹೇಳಿದ,

"ಶೆಟ್ಟಿ ಸತ್ತ, ಚ್ಯಾ-ಚುಟ್ಟ್ಯಾದ ಕಾಲಾಗ ಸತ್ತ!"

ಓಂಗ ಹೇಳಿ ಆ ಮನಿಮಾಲಕನ ಕಥಿ ಹೇಳಿದರು. ನಿಜವಾಗಿ ಸದ್ಯಾ ಶೆಟ್ಟಿ ಚ್ಯಾ-ಚುಟ್ಟ್ಯಾದ ಕಾಲಾಗ ಸತ್ತಿದ್ದ! ಹೆಡ್ಡ, ಹೆಣ್ಣು, ಹೆಂಡದ ಕಾಲಾಗ ಸತ್ಯಾನಾಶ ಆದ ಉದಾಹರಣೆ ಬಹಳಷ್ಟು ಅವೆ. ಆದರ ಚಹಾ ಚುಟ್ಟಾದಂಥ ಕ್ಷುಲ್ಲಕ ವ್ಯಸನಗಳಿಗೆ ತುತ್ತಾಗಿ ಸದ್ಯಾ ಶೆಟ್ಟಿ ಹ್ಯಾಂಗ ಸತ್ತ? ಇದರಾಗ ಇವನ ಅವತಾರ ಹ್ಯಾಂಗ ಮುಗೀತು? ಇವ ಊಟನ ಮಾಡತಿದ್ದಿಲ್ಲಂತ. ಯಾವಾಗಲೂ ಕಡಕ ಚಹಾ ಮಾಡಿ ಕುಡಿಯುವ ಮತ್ತ ಚುಟ್ಟಾ ಒಂದರ ಹಿಂದ ಒಂದು ಸೇದಾವ. ಮನ್ಯಾಗ ಒಂದು ಮುದುಕಿ. ಆಕಿ ಹೇಳಿ ಹೇಳಿ ಬೇಸತ್ತಳು, ಆದರೂ ಸದ್ಯಾ ಕೇಳಲಿಲ್ಲ, ಐದೈದು ಮಿನಿಟಿಗೆ ಒಮ್ಮೆ ಚಹ ಕುಡಿಯುವ ಮತ್ತು ಚುಟ್ಟಾ ಸೇದಕೊತ ಕೂಡಾವ. ಇದನ್ನ ಬರಿ ತಾ ಒಬ್ಬನ ಮಾಡಾವ ಅಲ್ಲ. ಹತ್ತಿಪ್ಪತ್ತು ಚಾಂಡಾಳ ಚೌಕಡಿಯವರನ್ನ ಕೂಡಿಸಿ ಮಾಡಾವ. ಜನರಿಗೇನೂ ಫುಕಟ ಸಿಕ್ಕರ, ವಿಷಾನೂ ಬಿಡವರಲ್ಲ. ಸದ್ಯಾ ಕರಿಯುವ ಮತ್ತ ಈ ಜನ ಹೋಗವರು. ಆವನ ಚಹಾ ಕುಡಿಯುವರು, ಚುಟ್ಟಾ ಸೇದವರು ಮತ್ತ ಮ್ಯಾಲೆ ಅವನ್ನ ಬಯ್ಯಾವರು.

"ಹುಚ್ಚ ಆದ ಆತು, ಹೀಂಗ ಮಾಡಿ ಭಿಕಾರಿ ಆಗಿ ಹೋಗತಾನ ಆತು!"

ಈ ಮಾತಂ ಕೇಳಿ ಸದ್ಯಾಗ ಏನೂ ಅನಿಸಂತಿದ್ದಿಲ್ಲ. ಅವ ದಾನಶೂರನ ಆಗಿದ್ದ. ಇದ್ದೇ ರೀತಿ ಅನೇಕ ವರ್ಷ ನಡೀತಂ. ಕ್ರಮೇಣ ತಾ ದುಡಿದು ಮಾಡಿದ ಗಂಟು, ಅಪ್ಪ ಅಜ್ಜ ಮಾಡಿದ ಗಂಟು ಸಾವಕಾಶ ಕರಗಹತ್ತಿತಂ. ಅದೂ ತೀರಿ ಮನ್ಯಾಗಿನ ಚಲೋ ಆಕಳ, ಒಂದು ಹೋರಿನೂ ಮಾರಿದ. ಮಾರೋದು ಚಹ ಕುಡಿಯೋದಂ, ಚುಟ್ಟಾ ಸೇದೋದು ನಡದ ಇತ್ತು. ಮಾರಲಿಕ್ಕೂ ಏನೂ ಉಳಿಯಲಿಲ್ಲ! ಒಳೆ ಚಲೊ ದೇಹವಿದ್ದ ಶೆಟ್ಟಿ ಕಂಗಾಲಾಗಿ ಎಲುಬಿನ ಹಂದರ ಅಷ್ಟ ಉಳಿತಂ. ಚುಟ್ಟಾದ ಹೊಗೆಯಿಂದ ಎದಿ ಸಾಣಿಗಿಯಾಗಿತ್ತು. ಚಹದಿಂದ ಹಸಿವೆಯಾಗುತ್ತಿದ್ದಿಲ್ಲ. ಕೆಮ್ಮು ಬಂತು, ದಮ್ಮು ಹತ್ತಿತು. ಮುದುಕಿ ಸತ್ತುಹೋಯಿತಂ. ಕೇಳವರ ಇಲ್ಲದ್ಹಾಂಗ ಆದರು. ಛಾವಣ್ಯಾಗ ಬರೋ ಹೋಗವರನ್ನೆಲ್ಲ ಚುಟ್ಟಾ ಕೇಳತಿದ್ದ. ಕನಿಕರಪಟ್ಟು ಓಣ್ಯಾನ ಹೆಣಮಕ್ಕಳಂ ಯಾವಾಗರ ಬೆಲ್ಲದ ಚಹಾಮಾಡಿ ಕೊಡತಿದ್ದರು. ಇಂಥ ದುರವಸ್ಥೆಯಲ್ಲಿದ್ದು ಒಂದಂ ದಿನ ಅಡಪುಹತ್ತಿದ ನಾಯಿಹಾಂಗ ಸತ್ತಬಿದ್ದಿದ್ದ!

ಸದ್ಯಾನ ಈ ವಿಲಕ್ಷಣ ಕಥಿ ಕೇಳಿ ನಾ ಅಂದೆ,

"ಹಾಂಗಾರ ಈ ಆಸ್ತಿಗೆ ಯಾರೂ ವಾರಸದಾರರ ಇಲ್ಲ. ಗರಡಿಮಂನಿ ಕಟ್ಟಲಿಕ್ಕೆ ಜಾಗಾ ತಗೊಳಲಿಕ್ಕೆ ಯಾವ ಅಡ್ಡೀನೂ ಇಲ್ಲ."

ಆದರ ಇದಕ್ಕೂ ಯಾರೂ ಒಪ್ಪಲಿಲ್ಲ. ಶೆಟ್ಟಿ ಜಾಗಾ ನಾವು ಹ್ಯಾಂಗ ತಗೊಳ್ಳೋದಂ ಅಂತ ಅಂದು ಎಲ್ಲರೂ ಸುಮ್ಮನ ಇದ್ದರು. ನಾ ತಿಳಿಸಿ ಹೇಳಿದೆ, ಗೀಳಾದ ಮಂನಿ ಕೆಡವಿ ಜಾಗಾ ಸಾಫ ಮಾಡಿದರ ಸಕಾಶ ಮಾಡಲಿಕ್ಕೆ ಅನುಕೂಲ ಆದಿತೆಂದು ತಿಳಿಸಿದೆ. ಯಾರೂ ಅತ್ತ ಗಮನಕೊಡಲಿಲ್ಲ. ನಾನೇ ಒಂದಂ ದಿನ ಸಾಲಿ ಹುಡುಗರನ್ನ ಕರಕೊಂಡಂ ಹೋಗಿ, ಗೀಳಾದ ಗೋಡೆಗಳನ್ನು ಕೆಡವಲು ಸುರುವು ಮಾಡಿದೆ. ವಾನರಸೇನಾ ಕೆಲಸಕ್ಕ ಹತ್ತಿತು. ಸಲಿಕಿ ಗುದ್ಲಿ ತಗೊಂಡು ಹುಡುಗರು ಮಂನಿ ಕೆಡವಿ ನೆಲಸಮ ಮಾಡಹತ್ತಿದರು. ಮಾಸ್ತರ ಕೈಯಾಗ ಗುದ್ಲಿ ತಗೊಂಡಂ ಮಂನಿ ಕೆಡವಾಕ ಹತ್ಯಾನ; ಕೆಡವೂ ಪಾಪ ಅವನ ಪಾಲಿಗೆ ಅಂತ ಅಂದಂಕೊಂಡು, ಊರವರು ಈ ಕೆಲಸದಲ್ಲಿ ನೆರವಾದರು. ಜಾಗಾ ಸಾಫ ಆತು. ನಾಲ್ಕಾರ ದಿನದಾಗ ಶೆಟ್ಟಿ ಮಂನಿ ಇತ್ತೊ ಇಲ್ಲೊ ಎಂಬುದರ ಗುರ್ತ ಉಳಿಯಲಿಲ್ಲ.

ಆಮೇಲೆ ಇಮಾರತಿ ಕಟಿಗಿ ಕೆಲಸಕ್ಕ ಹತ್ತಬೇಕಾತು. ಊರ ಹಿರಿಯಂರನ್ನ ಕಟಗೊಂಡ ಅಡವಿಅಡವಿಗಳಿಗೆ, ಹೊಲಹೊಲಗಳಿಗೆ ಹೋದೆ. ತೊಲೆಗಳಾಗುವಂಥ ಬೇವಿನಮರ ಇದ್ದವರು, ತಕ್ರಾರ ಮಾಡಿಯಾದರೂ ಕೊಡಹತ್ತಿದರು. ಆದಷ್ಟು ಪೊಳ್ಳಗಿಡನ ತೋರಿಸಾವರು. ಅವು ತೊಲಿಗೆ ನಿರುಪಯುಕ್ತವಾಗಿದ್ದವು. ಅವರ ಕೂಡ ವಾದಾವಾದಿ ಚಲೋಗಿಡ ದೊರಕಿಸಬೇಕಾಗತಿತ್ತು. ನಾನು ಇದನ್ನೆಲ್ಲ ಕಂಡು ಬೇಸತ್ತಿದ್ದೆ, ನಾ ಏನು ನನ್ನ ಮಂನಿ ದಶಿಂದ ಕೇಳತಾ ಇರಲಿಲ್ಲ. ಒಟ್ಟ ಜನರಿಗೆ ಕೊಡೋದ

ಬೇಡಾಗಿತ್ತು. ಆತ್ಮಸಂತೋಷದಿಂದ ಕೊಡವರು ಇರಲಿಲ್ಲವೆಂದಲ್ಲ; ಆದರೆ ಈ ಮಾತು ತೊಂದರೆಯಂದಾಯಿತು. ಗಿಡ ಸಿಕ್ಕಮ್ಯಾಲೆ ಕಡಿಯುವವರನ್ನು ಹುಡುಕಿತಂದು, ಅವನ್ನು ಕಡಿಸಿ, ಯಾರದಾರ ಚಕಡಿ ತಂದು ಜಾಗಾತನಕ ಹೊರಿಸಿ, ಬಡಿಗೇರಿಗೆ ಒಪ್ಪಿಸ ಬೇಕಾಗತಿತ್ತು. ಈ ಕ್ರಮ ಹೀಗೇ ನಡೆದಿತ್ತು. ಅದಕ್ಕಾಗಿ ಬೇಸರತಿದ್ದೆ, ಜನರಿಗೆ ವಿನಂತಿಮಾಡಿಕೊಳ್ಳತಿದ್ದೆ, ಪ್ರಸಂಗ ಬಂದರ ಬೆದರಿಸೋದು ಮಾಡತಿದೆ. ವಿಂತಿಮೀರಿ ತ್ರಾಸಾದಾಗ ಒಮ್ಮೊಮ್ಮೆ ನಾನು ಕಾರಭಾರಿಗೆ ಅನ್ನತಿದ್ದೆ,

"ಅಜ್ಜಾ, ಸಾಕು ಈ ಗರಡಿಮನಿ ಕೆಲಸ. ನಾ ರಜಾ ತಗೊಂಡು ಹೋಗತೇನಿ. ನಿಮ್ಮ ಗರಡಿಮನಿಯೇನು, ನೀವೇನು, ಕಟ್ಟರಿ ಇಲ್ಲದರ ಬಿಡರಿ. ನಿಮಗ ಬ್ಯಾಡಾಗಿದ್ದರ ನಾ ಯಾಕ ನನ್ನ ರಕ್ತಾ ಸುಡಲಿ?"

ಕಾರಭಾರಿ ತಿಳಿಸಿ ಹೇಳವ.

"ಹೌದೊ ಮಗನ, ನೀ ಹೋದರ ಎಲ್ಲಿ ಇಮಾರತು ಎಲ್ಲಿ ಕಟ್ಟಡ? ಮಾಡಿದ್ದೆಲ್ಲ ಹೊಳ್ಯಾಗ ಹುಣಸಿಹಣ್ಣು ತೊಳದಾಂಗ ಆದೀತು. ಕಟಿಗಿ ಕೊಳತಹೋದಾವು, ಕಟ್ಟಿದ ಗೋಡಿ ಕಿತ್ತಿ ಜನ ಕಲ್ಲ ಹೊರತಾರ; ಯಪ್ಪಾ ಕಟ್ಟೋದು ಸಸಾರ ಅಲ್ಲ. ತರಾಸ ಆಗೋದ. ದೈವದ ಕೆಲಸ ಅದರಾಗ ಹೊಲಗೇರಿ ಇರೋದ. ಕೈಯಾಗ ಹಿಡದ ಕೆಲಸ ನಡಾಕಕ ಬಿಡಬ್ಯಾಡ ಪೂರಾ ಮಾಡು."

ನಾನಾರ ಯಲ್ಲೆ ಬಿಡಾವ ಇದ್ದೆ. ಅದು ಅಸಾಧ್ಯವಾದ ಮಾತು. ಗರಡಿಮನಿ ಅಂದರ ನನ್ನ ಪ್ರತಿಷ್ಠೆಯ ಪ್ರಶ್ನೆಯಾಗಿತ್ತು. ಬನಗರವಾಡಿಯ ಮಾನಬಿಂದುವಾಗಿತ್ತು. ಸಣ್ಣಸಣ್ಣ ಹಳ್ಳಿಯವರು ಬನಗರವಾಡಿ ಕಡೆ ಕುತೂಹಲದಿಂದ ನೋಡತಾ ಇದ್ದರು. ಈ ಹುಚ್ಚಕುರಿ ಏನು ಕೆಲಸ ಮಾಡ್ಯಾವು? ಇವರಿಂದ ನೀಗೊ ಮಾತಲ್ಲ. ಮಾಸ್ತರ ಉತ್ಸಾಹಿ ಅದಾನ. ಆದರ ಬರೀ ಉತ್ಸಾಹದಿಂದ ಆಗೊ ಕೆಲಸವಲ್ಲ. ಹೀಗೆ ನೆರೆಹೊರೆಯ ಹಳ್ಳಿಯವರು ಆಡತಾ ಇದ್ದರು. ಕೆಲಸ ಮುಗಿಸೇ ಅವರಿಗೆ ತೊರಸೋದೂ ಇತ್ತು. ಹತ್ತಿಪ್ಪತ್ತು ಹಳ್ಯಾಗ ಇಲ್ಲದಂಥ ಗರಡಿಮನಿ ಕಟ್ಟಿ ತೋರಸೊದಿತ್ತು.

ಗಿಡದ ಕೆಲಸಕ್ಕೆ ನಾ ಒಮ್ಮೆ ಬಾಳ್ಯಾ ಬನಗರ ಅಡವಿಗೆ ಹೋಗಿದ್ದೆ. ನನ್ನ ಜೊತೆ ಆಯುಬೂ ಮತ್ತು ಆನಂದ ಇದ್ದರು. ಅವನ ಅಡವ್ಯಾಗಿದ್ದ ಒಂದು ಗಿಡ ನಮಗ ಬೇಕಾಗಿತ್ತು. ಅದರೊಳಗಿಂದ ಉತ್ತಮವಾದ ತೊಲಿಗಳು ಹೊರಡುತ್ತಿದ್ದವು. ಹಾದ್ಯಾಗ ಆನಂದ ಗಲೋಲದಿಂದ ಒಂದು ಹಕ್ಕಿ ಹೊಡೆದ. ಹೊಡೆತ ತಾಳಲಾರದ ಆ ಹಕ್ಕಿ ಚಡಪಡಿಸುತ್ತ ಬಿದ್ದಿತ್ತು. ಆಗ ಆಯುಬೂ ಅದನ್ನ ಕೈಯಾಗ ತಗೊಂಡ. ಆನಂದ ಹಾಂಗ ಬ್ಯಾಟಿ ನೋಡಕೊತ ಹೊರಟ. ಆಯುಬೂ ಹಕ್ಕಿ ಪುಚ್ಚ ತಕ್ಕೊತ ಹೊರಟ. ನಾ ಒಬ್ಬನ ಮುಂದೆ ನಡೆದಿದ್ದೆ. ಮಧ್ಯಾನ್ಹ ನಾಲ್ಕು ನಾಕುವರೆ ಘಂಟೆಯಾಗಿರಬೇಕು. ಬಾಳಾನ ಅಡವಿ ಮುಟ್ಟಿದೆವು. ಆಗ ಅವ ಹಳೆ ಕಣಿಹಗ ನೆಟ್ಟಗ ಮಾಡಿಕೊತ ಕೂತಿದ್ದ.

ನಮಗೆ ಬೇಕಾದ ಬೇವಿನ ಮರದ ನೆರಳಾಗ ಕೂತಿದ್ದ. ಬರಿಮೈಲೆ ಇದ್ದ ಧೋತರ ಉಟಗೊಂಡಿದ್ದ. ಅಡ್ಡಾಗಲ ಮೂಗು, ಕಿರಿದಾದ ಹಣೆ ಮತ್ತು ಸಪಾಟಾದ ಗಡ್ಡ ಇದ್ದ ಬಾಳಾ, ಏಕಾಗ್ರತೆಯಿಂದ ಹಗ್ಗ ನೆಟ್ಟಗ ಮಾಡತಿದ್ದ.

ನಾನು ಯಾಕ ಬಂದಿದ್ದೆಂಬುದು ಅವ ಮೊದಲ ತಿಳಕೊಂಡಿದ್ದ. ಅವ ಸ್ವಾಗತದ ಯಾವ ಭಾವವನ್ನೂ ತೋರಲಿಲ್ಲ. ಕೂಡ್ರಿ ಅಂತ ಸಹ ಅನಲಿಲ್ಲ. ಏನಾರ ಮಾತಾಡ ಬೇಕಂತ ಅವ ಅಂದ,

"ಯಾತಲಾಗ ಪ್ಹಂಟದ ಮಾಸ್ತರ ಸವಾರಿ"?

"ಇಲ್ಲ ನಿನ್ನ ಕಡೆನ ಬಂದಿದ್ದೆ."

ಹಿಂಗಂದು ಹೆಂಡಿ ಸರಿಮಾಡಿ ಕೂತೆ._ ಬಾಳಾ ಸುಮ್ಮನ ಇದ್ದ. ನಾ ಧೈರ್ಯ ಮಾಡಿ ಅಂದೆ,

"ಗರಡಿಮನಿಗೆ ಗಿಡ ಬೇಕಾಗ್ಯದ, ಯಾವಾಗ ಕೊಡತಿರಿ?"

"ಯಾವ ಗಿಡ?"

ಇಂಥಾ ಮಾತಿನ ಅಭ್ಯಾಸ ನನಗ ಆಗಿತ್ತು. ಆದರೂ ಮಾತಿನಿಂದ ಎಲ್ಲಿಯೋ ನೋವನಿಸಿತು. ಆ ಭಾವನೆ ಮುಖದ ಮೇಲೆಯೂ ತೋರಿರಬೇಕು. ಮೇಲಿನ ಬೇವಿನಮರದತ್ತ ನೋಡಿ ಅಂದೆ,

"ಮತ್ಯಾವ ಗಿಡ?" ಈಗ ನಾವು ನೆರಳಾಗ ಕೂತ ಗಿಡನ ಅದು."

ಇಲ್ಲ ಅಂತಾ ಗೋಣ ಅಗಳಾಡಿಸಿ ಬಾಳಾ ಅಂದ,

"ಅದೇನು ಸಿಗ್ಹಾಂಗಿಲ್ಲ ಅಂದೆ !"

"ಅದ್ಯಾಕ?"

"ನನ್ನ ಮರ್ಜಿ."

"ಹೀಂಗಂದರ ಹ್ಯಾಂಗ ನಡಿದೀತು?"

"ಅದ್ಹ್ಯಾಂಗ ನಡಿಯುದಿಲ್ಲ ನೋಡತೇನೆ. ಮುಂಗೈ ಜೋರ ಇದ್ದಾವ ಬಂದ ಬೇಕಾರ ತಗೊಂಡು ಹೋದಾನು ಗಿಢ."

"ಮುಂಗೈ ಜೋರಿನ ಪ್ರಶ್ನೆ ಇಲ್ಲ. ಇದು ಅವರವರ ಸಂತೋಷದ ಮಾತು."

"ಹಾಂಗಾರ, ನನ್ನ ಖುಷಿ ಇಲ್ಲ. ನನಗ ನಿಮೂರು ಬ್ಯಾಡ, ಗರಡಿಮನೀನೂ ಬ್ಯಾಡ. ಅಡವಾಗಿ ನೆಳ್ಳಿಗೆ ಇರೋದು ಇದೊಂದ ಗಿಡ ಅದ. ನನಗ, ನನ್ನ ಮಕ್ಕಳಿಗೆ, ದನಕರಗಳಿಗೆ ನೆಳ್ಳಿಗೆ ಇರೋದು ಇದ ಒಂದು ಗಿಡ. ಅದನ್ನೂ ನೀವು ಕಸಕೋಬೇಕು ಅಂತ ಮಾಡೀರಿ? ಗಿಡಕ್ಕ ಕೊಡ್ಲಿಪೆಟ್ಟು ಹಾಕೋದಕಿಂತ ಮೊದಲ ನನ್ನ ಕುತ್ತಿಗ್ಗೆ ಕೊಡ್ಲಿಪೆಟ್ಟು ಬೀಳಲಿ, ಆಮ್ಯಾಲೆ ತಗೊಂಡಹೋಗರಿ."

"ಒಳ್ಳೇದು !"

ನಾ ಎದ್ದು ಊರಕಡೆ ಹೊರಟೆ, ಹಾದ್ಯಾಗ ಆಯಂಬ್ಯಾ, ಆನಂದ ಕೂಡಿದರು.

''ಬಾಳಾನ ಗಿಡ ಸಿಕ್ಕತೇನು?''

''ಇಲ್ಲ, ಮೊದಲ ತನ್ನ ಕುತಿಗ್ಗೆ ಕೊಡ್ಲಿಪೆಟ್ಟು, ಆಮ್ಯಾಲೆ ಗಿಡಕ್ಕ ಅಂತ ಹೇಳಿದ! ಹೀಂಗ ಅಂತಾನ ಅವ.''

ಆಮ್ಯಾಲೆ ಒಮ್ಮೆ ನಾನು, ಕಾರಭಾರಿ, ರಾಮಾ ಮತ್ತು ಊರಾಗಿನ ಇಬ್ಬರು ಮೂವರನ್ನ ಕರಕೊಂಡ ಬಾಳಾನಕಡೆ ಹೋದೆ, ಆಗ್ಯಾ ಅವ ಹಣಿಹಗ್ಗ ನೆಟ್ಟಗ ಮಾಡಿಕೊತ ಕೂತಿದ್ದ. ಅವ ಗಿಡದ ನೆರಳಾಗ ಕೂತಿದ್ದ, ಒಂದೆರಡು ಕುರೀನೂ ಕಿವಿ ಅಗಳಾಡಿಸಕೊತ ಅಲ್ಲಿ ಕೂತಿದ್ದವು. ಯತ್ತೂ ನೆರಳಾಗ ಕಟ್ಟಿದ್ದ. ಹೆಂಡತಿಮಕ್ಕಳೂ ಅಲ್ಲೇ ಇದ್ದರು. ನಮ್ಮನ್ನು ನೋಡಿ ಬಾಳಾ ಕೈಯಾಗ ಕೊಡ್ಲಿ ಹಿಡಕೊಂಡು ಎದ್ದ. ನಾವು ಬೆರಗಾಗಿ ನಿಂತಲ್ಲೇ ನಿಂತೆವು. ಈ ದೊಡ್ಡ ಆಳು ಹಾಣಾಹಾಣಿಗೆ ಬರತಾನೇನೋ ಎಂಬ ಸಂಶಯ ಬಂದಿತು. ಅದನ್ನ ನೋಡಿ ನಾ ತಣ್ಣಗಾದೆ. ಅವನ್ನ ನೋಡಿ ಕಾರಭಾರಿ ಮುಂದ ಆದ. ಉಳಿದವರೆಲ್ಲ ನಿಂತಲ್ಲೆ ನಿಂತೆವು. ವಯಸ್ಸಾದ ಕಾರಭಾರಿ ಕಾಲಾಗಿನ ವಂಚ್ಚಿ ಜಕ್ಕೊತ ಮುಂದೆ ಆದ. ಬಾಳಾ ತನ್ನ ಕೈಯಾಗಿನ ಕೊಡ್ಲಿ ಅವನ ಕೈಯಾಗ ಕೊಟ್ಟು ಅಂದ,

''ಗಿಡ ಕಡಿಯೊದಕಿಂತ ಮೊದಲ ನನ್ನ ಕುತಿಗಿ ಹೋಗಬೇಕು ಅಂತ ನಿನ್ನೇ ಮಾಸ್ತರಗ ಹೇಳಿನಿ, ನಿಮಗೂ ಹೇಳತೇನಿ............'' ಹೀಂಗಂದು ತಿರುಗಿ ನಿಂತು ಮನಿಯವರಕಡೆ ಬೊಟ್ಟುಮಾಡಿ ಅಂದ,

''ನನ್ನ ಮನಿಮಂದಿ, ನನ್ನ ದನಕರ ಇವರೆಲ್ಲರ ಕುತಿಗಿ ಕಡದು, ಆಮ್ಯಾಲೆ ಗಿಡ ಕಡಿರಿ.''

ಬಾಳಾನ ಕೈಹಿಡಿದು ಅವನ್ನ ಕೆಳಗೆ ಕೂಡಿಸಿ ಕಾರಭಾರಿ ಅಂದ,

''ಬಾಳಾ ಸುಮ್ಮನಿರು, ನನ್ನ ಮಾತಾರ ಕೇಳು.''

ಮುದಕನ ಕೈಸರಿಸಿ ಎದ್ದು ಕೈಮಾಡಿಕೊತ ಬಾಳಾ ಅಂದ,

''ನಾ ಯಾರ ಮಾತೂ ಕೇಳವ ಅಲ್ಲ. ನನ್ನ ಯಲ್ಯಾರ ಹುಗದುಬಿಡು. ನಾ ಏನು ನಿಮ್ಮ ಗರಡಿಮನಿಗೆ ಗಿಡ ಕೊಡವ ಅಲ್ಲ. ನಂದೇನು ಆಗೋದೈತಿ ಅದಾಗಲಿ.''

ಕಾರಭಾರಿ ಶಾಂತನಾಗಿದ್ದು ಕದಲದೆ ನಿಂತು ಅಂದ,

''ಬಾಳಾ, ಸೊಕ್ಕಿನ ಮಾತ ಬ್ಯಾಡ. ದೈವಕ್ಕ ಒಂದು ಗಿಡ ಕೊಟ್ಟರ ನಿನ್ನ ಮನಿ ಏನು ಹಾಳಾಗುದಿಲ್ಲ.''

''ನನ್ನ ಮನಿ ಹಾಳಾಗಲಿ ಬಿಡಲಿ, ನಾ ಏನು ಗಿಡ ಕೊಡವ ಅಲ್ಲ.''

''ಈ ಮಾತು ಪಕ್ಕಾ ಹೌದಲ್ಲ?''

''ಹೌದು, ಪಕ್ಕಾ! ಪಂತ ಸರಕಾರ ಬಂದರೂ ಕೊಡವ ಅಲ್ಲ, ಇಂಗ್ಲೀಷ ಸಾಹೇಬ

ಬಂದರೂ ಕೊಡಾವ ಅಲ್ಲ. ನನಗ್ಯಾವ ಬಂದು ಗಲ್ಲಿಗೇರಿಸತಾನ ಅವ ಏರಸಲಿ!" ಇದನ್ನೆಲ್ಲ ಕೇಳಿ ಕಾರಭಾರಿ ತಲೀನೂ ಕೆಟ್ಟಿತು ಮತ್ತು ಅವನೂ ಕೈಮಾಡಿ ಅಂದ,

"ಹೂಂ, ನಡಿರಿ ತಿರುಗಿ,"

ಬಾಳಾನ ಸೊಕ್ಕಿನ ಮಾತು ಕೇಳಿ ಎಲ್ಲರೂ ಸಿಟ್ಟಿಗೆದ್ದಿದ್ದರು. ಅವನ ಅಡವ್ಯಾಗ ಇರ್ದೇನು ಒಂದ ಗಿಡ ಇತ್ತೆಂದಲ್ಲ. ಬದುವಿನ ಮ್ಯಾಲೆ ಚಿಕ್ಕಪುಟ್ಟ ಬೇವಿನಗಿಡ ಇದ್ದ ಇದ್ದವು. ಈ ಗಿಡ ಕೊಟ್ಟಿದರ ಅವಗ ಬಿಸಲಾಗ ನಿಂದರೊ ಪ್ರಸಂಗನೂ ಇದ್ದಿಲ್ಲ.

ಕಾರಭಾರಿ "ನಡೀ" ಅಂದರೂ ರಾಮಾ ಬನಗರ ಜಾಗಾ ಬಿಟ್ಟು ಏಳಲಿಲ್ಲ. ಅವ ಸಿಟ್ಟಿಗೆದ್ದು ಅಂದ,

"ಬಾಳಾ. ನೆಟ್ಟಗಾಗಲಿಕ್ಕಿಲ್ಲ. ನೀನು ದೈವಕ್ಕನ ತಿರುಗಿಬಿದ್ದೀದಿ! ದೈವದ ಮಾತ ಮೀರೀದಿ!"

ಬಾಳಾ ಚೀರಕೋತ ಅಂದ,

"ನಿನ್ನ ದೈವ ತಗ್ಗೊಂಡ ನನಗೇನು ಮಾಡೋದ ಅದ? ಎಂಟ ವರ್ಷ ನನ್ನ ಭೂಮ್ಯಾಗ ನಾ ಅದೇನಿ. ಮುಂದೂ ಇಲ್ಲೆ ಇರತೇನಿ. ನನಗೇನು ದೈವದ ಅಂಜಿಕಿ! ರಾಮ್ಯಾ, ತೊಯಿಸಿಕೊಂಡವಗ ಮಳಿ ಅಂಜಿಕಿ ಏನು?"

ಈ ಮಾತು ಕೇಳಿ ರಾಮಾ-ಆನಂದ ತಲಿತಿರುಗಿದಾಂಗ ಆಗಿ ಬಾಳ್ಯಾನ ಮೈಮ್ಯಾಲೆ ಏರಿಹೋದರು. ಅಷ್ಟರಾಗ ಕಾರಭಾರಿ ಕೈಯಾಗಿನ ಬಡಗಿಲೆ ಅವರನ್ನು ಹಿಂದೆಸರಿಸಿ ಖಂಡಿತವಾಗಿ ಅಂದ,

"ಬಾಳಾ, ಆಡಿದ ಮಾತು ಕಡಿತನಕ ಉಳೀಲಿ. ದೈವದ ಹತ್ತರ ಮಾತ್ರ ಎಂದೂ ಬರಬ್ಯಾಡ."

ನಾವೆಲ್ಲರೂ ಏನೂ ಮಾತನಾಡದೆ ಊರಕಡೆ ಬಂದೆವು. ಊರ ಹತ್ತರ ಬಂದ ಕೂಡಲೆ ಕಾರಭಾರಿ ಅಂದ.

"ಬಾಳ್ಯಾನ ಜೋಡಿ ಯಾರೂ ಸಂಬಂಧ ಇಡಬ್ಯಾಡರಿ. ಅವನ ದನಕರ ನಿಮ್ಮ ಅಡವ್ಯಾಗ ಬರಗೊಡಬ್ಯಾಡರಿ, ಅವಗ ತೊಂದರ್‍ಯಾದರ ಯಾರೂ ಸಹಾಯ್ಯ ಮಾಡ ಬ್ಯಾಡರಿ. ನೊಡ್ಯಾರ ನೋಡೋಣು ದೈವದ ವಿರುದ್ಧ ಎಷ್ಟು ದಿನ ಇರತಾನ?"

ಊರತುಂಬ ಈ ಸುದ್ದಿ ಹಬ್ಬಿತು. ಬಾಳ್ಯಾಗ ದೈವ ಜಾತಿಹೊರಗ ಇಟ್ಟದ ಅನ್ನೊ ಸುದ್ದಿ ಎಲ್ಲ ಹುಡುಗರಿಗೂ ಗೊತ್ತಾತು. ಅದು ಅಮಲಿನ್ಯಾಗನೂ ಬಂತು. ಕುರಿಕಡಿಯಲಿಕ್ಕೆ ಬಾ ಅಂತ ಬಾಳ್ಯಾನ ಮಗ ಅಯುಬೂಗ ಕರಿಲಿಕ್ಕೆ ಬಂದ. ಅಯುಬೂ ಅಂದ,

"ಊರವರ ನಿಮ್ಮಪ್ಪನ ಜಾತಿ ಹೊರಗ ಹಾಕ್ಯಾರ, ನಾ ಏನು ಬರುದಿಲ್ಲ."

"ನಿನಗೇನು ಊರಿನ ಸಂಬಂಧ! ಕೊಟ್ಟ ರೊಟ್ಟಿಚೂರಿಗೆ ಕೆಲಸ ಮಾಡವ.

ನಾ ಏನು ನಿನಗ ಫುಕಟ ಕೆಲಸ ಮಾಡೂಂತ ಹೇಳುದಿಲ್ಲ. ಶೇರ ಏರಡು ಶೇರು ಕಾಳ ಕೇಳು ಬೇಕಾದರ."

"ನಿನ್ನ ಶೇರ ಎರಡು ಶೇರಿನ ಗರಜು ನನಗಿಲ್ಲ. ಹೋಗು ನೀ." ಮಗ ಹೇಳಿದ ಮಾತು ಕೇಳಿ ಬಾಳಾ ಅವನ ಮ್ಯಾಲೆ ಒಡಕ್ಯಾಡಿದ. ಮಂಗನನ್ನು ತಾಲೂಕಿಗೆ ಕಳಿಸಿ ಕಟಕರವನ್ನ ಕರಿಸಿದ ಮತ್ತು ಕುರಿಕಡಿಸಿದ.

ಅವನ ಹೊಲದಾಗ ಕೂಲಿಯವರು ಕೆಲಸ ಮಾಡೋದನ್ನ ಬಿಟ್ಟರು. ಎರಡನೆ ಊರವರನ್ನ ಹೆಚ್ಚು ಕೂಲಿ ಕೊಟ್ಟು ಕರಿಸಿದ. ಬಾಳಾನ ಬಾವಿನೀರು ಸವಳಿತ್ತು. ಊರಾಗಿನ ಬಾವಿಯೊಳಗಿಂದ ಅವನ ಹೆಂಡತಿ ಎರಡು ಮೂರು ಕೊಡ ಸೀನೀರು ಒಯ್ಯುತಿದ್ದಳು. ಅವನ್ನ ತಗೊಂಡ ಹೋಗೋದನ್ನ ಜನ ಬಂದಮಾಡಿದರು. ಬಾಳಾ ತಾನ ಹೋಗಿ ಎರಡು ಮೂರು ಮೈಲಿನ ಮ್ಯಾಲಿಂದ ಸೀನೀರು ತರಹತ್ತಿದನು. ಊರವರ ಅಡವ್ಯಾಗ ದನ ಕಳಸೋದೂ ಬಂದಮಾಡಿದ. ಅವನ ಮಕ್ಕಳು ಸಾಲಿಗೆ ಬರದ್ಹಾಂಗ ಆದರು. ಇಷ್ಟಾದರೂ ಬಾಳಾ ದೈವದ ಮಾತು ಕೇಳಲೊಪ್ಪಲಿಲ್ಲ! ಈ ಜಿಗಟ ಮನಷ್ಯ ತನ್ನ ಮಾತ ನಡಿಸಿದ. ಹೀಂಗ ಎಷ್ಟು ದಿವಸ ನಡೀತದ ನೋಡೋಣು ಅಂತ ಊರ ಜನ ಅನ್ನುತಿದ್ದರು.

ನಾನು ಮಾಡಿದ ಅಂದಾಜು ತಪ್ಪಿತು. ಹುರುಪಿನಿಂದ ಕೈಗೊಂಡ ಗರಡಿಮನಿ ಕಟ್ಟಡದ ಕೆಲಸವು ಅತಿ ಮಂದಗತಿಯಿಂದ ನಡೆಯಿತು. ಇಮಾರತ ಕಟಿಗಿ ದೊರಕಿಸುವದರಲ್ಲಿ ಬಹಳಷ್ಟು ಕಾಲ ಹಾಳಾಯಿತು, ಒಡ್ಡರು ಖಣಿಯೊಳಗಿನ ಕಲ್ಲು ತಗದುಕೊಟ್ಟರು. ಅವನ್ನ ಹೊತ್ತುತಂದು ಹಾಕಲು ಬಹಳಷ್ಟು ಕಾಲ ಬೇಕಾಯಿತು. ಅದಕ್ಕ ಬಹಳ ಕಷ್ಟನೂ ಮಾಡಬೇಕಾಯಿತು. ಸುಣ್ಣ, ಉಸುಗು ತಂದು ಗಾಣಿಗೆ ಹಾಕಿ ಗಚ್ಚು ಮಾಡೊವರೊಳಗೂ ಕಾಲಹರಣವಾಯಿತು. ಮಳಿ. ಸ್ಕ್ರೂ ಮೊದಲಾದ ಕಬ್ಬಿಣ ಸಾಮಾನ ಸಿಗಲು ತೋಂದರೆಯಾಯಿತು. ಕಟ್ಟಡ ಕಟ್ಟುವ ಅನುಭವ ನನಗಿಲ್ಲದ್ದರಿಂದ, ಸುಮ್ಮನೆ ವ್ಯಾಳ್ಯಾ ಕಳಿತಾರಲ್ಲ ಅಂತ ಅನಿಸಿ ಜನರ ಮ್ಯಾಲೆ ಹರಿಹಾಯುತಿದ್ದೆ; ಆದರೆ ವಾಡಿಯ ಜನರಿಗೆ ಸಾವಕಾಶ ಕೆಲಸವಾಗುವದರ ರೂಢಿ ಇತ್ತು. ಕಟ್ಟಡ, ಭಾವಿ ಮೊದಲಾದ ಕೆಲಸ ಹಳ್ಳ್ಯಾಗ ಸುರುಮಾಡಿದರ, ಅವು ಮುಗಿಯೋದ ಅಪರೂಪ ಮತ್ತು ಮುಗದರ ಅಂಥ ಮಹತ್ವದ ಘಟನೆ ಇನ್ನೊಂದಿಲ್ಲ. ಹುರುಪಿನಿಂದ ಕೈಕೊಂಡ ಇಂಥಾ ಕೆಲಸ ಅರ್ಧಕ್ಕ ನಿಂದರತಾವ. ಮನಿಕಟ್ಟಿ ಆದರ ಬಾಗಿಲ ಇರುದಿಲ್ಲ, ಒಮ್ಮೊಮ್ಮೆ ಗೂಟಾ ಹಾಕಿರುದಿಲ್ಲ, ಒಮ್ಮೊಮ್ಮೆ ಮುಂದಿನ ಮಳಗಿ ಅರ್ಧಕ್ಕ ಉಳಿತದ. ಭಾವಿ ಆಗಿರತದ, ಆದರ ಗೋಡಿ ಕಟ್ಟಿರುದಿಲ್ಲ. ಇಂಥಾ ಅರ್ಧಕ್ಕ ನಿಂತ ಕೆಲಸ ಹಳ್ಳ್ಯಾಗ ಅನೇಕ ಇರತಾವ. ವಾಡಿ ಜನರಿಗೆ ಇದೆಲ್ಲ ಗೊತ್ತು. ಕೆಲಸ ಲಗೂ ಆಗತಾ ಇಲ್ಲ. ಇದರಲ್ಲಿ ಅವರಿಗೇನು ವ್ಯಸನವೆನಿಸುತ್ತಿರಲಿಲ್ಲ. ತಮ್ಮ ಕೆಲಸ ಮುಗಿಸಿ, ಆಮ್ಯಾಲೆ ಈ ಕಟ್ಟಡದ ಕೆಲಸಕ್ಕ ಬರಾವರು,

ಕೈಕೊಂಡ ಕೆಲಸದಾಗ ತೊಡಗಿದಾಗ ನಾ ಹಸಿವು ನೀರಡಿಕೆ ಸಹ ಮರೆತು, ದುಡದ ದುಡಿತಿದ್ದೆ. ಒಮ್ಮೊಮ್ಮೆ ಊಟ ಮಾಡತಿದ್ದಿಲ್ಲ. ಎಂಟೆಂಟು ದಿನ ಗಡ್ಡ ಮಾಡತಿದ್ದಿಲ್ಲ, ವ್ಯಾಳ್ಯಾಕ್ಕ ಸರಿಯಾಗಿ ಝಳಕ ಆಗತಿದ್ದಿಲ್ಲ, ಸೂಟ್ಯಾಗ ಮನಿಗೂ ಹೋಗತಿದ್ದಿಲ್ಲ. ತಲ್ಯಾಗ ಬರೀ ಸುಣ್ಣ, ಬಣ್ಣ, ಕಲ್ಲು, ಮೆಂಟ್ಯಲ, ಕಟಿಗಿ ಇವ ಬಿದ್ದವು.

ಕಲ್ಲು ಹೇರಿಹೇರಿ ವಾಡ್ಯಾಗಿನ ಚಕ್ಕಡಿ ಗೀಳಾದವು, ಕೆಲವು ಮುರಿದವು. ಗೌಂಡೆರ ಕಲ್ಲುಕಟಿಯುವ ಸಪ್ಪಳ ಕೇಳಿಕೇಳಿ, ಜನರ ಕಿವಿ ಚಿಟ್ ಅನ್ನುತಿದ್ದವು. ನೋಡಿದಲ್ಲೆಲ್ಲ ಕಲ್ಲಿನಚೂರು, ತುಂಡು,

ಅಡ್ಯಾಡಿ ಅಡ್ಯಾಡಿ ಆಯಬೂನ ಕಾಲು ಸಾಣಿಗೆಯಂತಾಗಿದ್ದವು. ಹೇಳಿದ ಕೆಲಸ ಎಲ್ಲ ಮಾಡಿ ಮಾಡಿ, ಆವನ ಮೈ ಕಡಿಮೆಯಾಗಿತ್ತು. ಹಗಲೆಲ್ಲ ಕೆಲಸ ತಪ್ಪಸೊ

ಆನಂದ ಈಗ ಕೆಲಸಮಾಡಲಿಕ್ಕೆ ಹತ್ತಿದ್ದ. ಅತಲಾಗ ಇತಲಾಗ ಓಡ್ಯಾಡೊ ಕೆಲಸ ಅವಂದ ಇತ್ತು. ಬರೀ ಗರಡಿಮನಿ ಕೆಲಸದಾಗ ತೊಡಗ್ಯಾನ, ಮನಿಕೆಲಸದ ಕಡೆಗೆ ನೋಡುವಲ್ಲ ಅಂತ ರಾಮನ ಮಗ ತಕ್ರಾರ ಮಾಡತಿದ್ದ. ಕಾರಭಾರಿದೂ ಕುರಿಹಿಂಡಿನ ಕೆಲಸದ ಕಡೆ ಅಲಕ್ಷವಾಗಹತ್ತಿತು. ಗರಡಿಮನಿ ಬ್ಯಾಗಿ ಎಲ್ಲರಿಗೂ ಹತ್ತಿತು. ಈ ಕೆಲಸದೊಡನೆ ಸಂಬಂಧ ಬಾರದ ಒಂದೂ ಮನಿ ವಾಡ್ಯಾಗ ಇದ್ದಿಲ್ಲ.

ಎರಡನೆ ಸುಗ್ಗಿಯಾಯಿತು. ನೋಡನೋಡೋದರೊಳಗ ಒಂದು ವರ್ಷ ವಾಯಿತು. ರಂಟಿಕುಂಟಿ ಕೆಲಸ ಮುಗಿಯಿತು. ಕುರುಬರು ಉಣ್ಣೆ ಕತ್ತರಿಸಿ ಆಯಿತು. ಅವರ ಹೆಣಮಕ್ಕಳು ಉಣ್ಣೆ ಸ್ವಚ್ಛಮಾಡಿ ನೂಲಲಿಕ್ಕೆ ಹತ್ತಿದರು, ಪ್ಯಾಟಿಗೆ ಹೋಗಿ ನೂಲ ಮಾರಿ ವರ್ಷದ ಅರಿವಿ-ಶೀರಿ, ಪಟಕಾ, ಧೋತರ ಅಂಗಿ—ಖರಿದಿಯಾದವು! ಕೆಲವರು ನೂಲು ನೇಕಾರರಿಗೆ ಕೊಟ್ಟು ಕಂಬಳಿ ನೇಯಿಸಿಕೊಂಡರು. ಮತ್ತೊಮ್ಮೆ ಕುರಿ ಈಯ್ದವು. ಮೊದಲಿನ ಮರಿ ತಾಯಿನ್ನ ಮರೆತವು. ಬ್ಯಾಸಗಿ ಮುಗಿದು ಮಳೆಗಾಲ ಸಮೀಪ ಬಂತು. ಇನ್ನೂ ಗರಡಿಮನಿ ಕೆಲಸ ಮುಗಿಲಿಲ್ಲ. ನನ್ನ ಮ್ಯಾಲೆ ನಾನು, ಮಿತಿಮೀರಿ ಸಿಟ್ಟಾದೆ. ಎರಡನೆಯವರ ಮೇಲೂ ಹರಿಹಾಯಹತ್ತಿದೆ. ಆದರೂ ಕೆಲಸ ವೇಗದಿಂದ ಸಾಗಲಿಲ್ಲ.

ಇಷ್ಟು ದಿವಸ ಕಳೆದರು ಕಟ್ಟಡ ಮುಗಿಲಿಲ್ಲ ಎಂದು ಹೊರಗಿನ ಜನ ಟೀಕಿಸ ಹತ್ತಿದರು, ಮಾಸ್ತರ ಮಬ್ಬ ಕುರುಬರನ್ನ ಕಾಡಿ ರೊಕ್ಕ ಕೂಡಿಸಿದ. ಬನಗರವಾಡಿಗೆ ಗರಡಿಮನಿ ಅವಶ್ಯಕತೆ ಇರಲಿಲ್ಲ. ಈ ಸಣ್ಣ ಊರಿಗೆ ಯಾಕೆ ಈ ಹವ್ಯಾಸ? ಆಡುವ ಹುಡುಗರು ಅಡವ್ಯಾಗನೂ ಆಡತಾವ, ಉಸುಂಗನ್ಯಾಗನೂ ಆಡತಾವ. ಅವರೊಳಗಿಂದ ಫೈಲವಾನನ್ನ ಆರಿಸಲಿಕ್ಕೆ ಬರತಿತ್ತು. ಗರಡಿಮನಿ 'ಇಲ್ಲದಿದ್ದರ ಪೈಲವಾನ ಆಗಾವ ಏನಾರ ನಿಲ್ಲತಾನೇನು? ರೊಕ್ಕ ತಿನಲಿಕ್ಕೆ ಮಾಸ್ತರ ಹೂಡಿದ ಆಟ ಇದು. ಪಗಾರ ಸಾಲುದಿಲ್ಲ, ಅದಕ್ಕ ಈ ಹುಂಬ ಕುರುಬರನ್ನ ಹುರಿದುಂಬಿಸಿ, ತನ್ನ ಕಿಸೆ ತುಂಬೊ ಗತ್ತಿದು! ಇಂಥ ಮಾತು ಕೇಳಿ ಬೇಸರಪಟ್ಟು ನಾನು ಮೇಲಧಿಕಾರಿಗಳಿಗೆ ಬರದೆ, "ಗರಡಿಮನಿ ಕೆಲಸ ಮುಗಿದಿದೆ. ಪಂತಸರಕಾರದವರು ದಯವಿಟ್ಟು ವಾಡಿಗೆ ಭೇಟಿ ನೀಡಿ ಅದರ ಉದ್ಘಾಟನೆ ಮಾಡಬೇಕು.'' ಹೀಗೆ ಬರೆದು ಟಪಾಲಿಗೆ ಹಾಕಿ ವಾಡೀ ಜನರಿಗೆ ಹೇಳಿದೆ. ''ಮುಂದಿನ ತಿಂಗಳ ಪಂತಸರಕಾರದವರು ಬರುತ್ತಾರೆ. ಗರಡಿಮನಿ ಮುಗಿಸಿರಿ, ಇಲ್ಲದಿದ್ದರೆ ಅವರಿಗೆ ಹೋಗಿ ಹೇಳಿರಿ, ''ಸರಕಾರ ನಮ್ಮ ತಪ್ಪಾಯಿತು. ಈ ಕೆಲಸ ನಮ್ಮಿಂದ ಮುಗಿಸೋದು ಆಗುದಿಲ್ಲ'' ಅಂತ.

ದಾದೂ ಬಾಲಟ್ಯಾ ಇನ್ನೂ ಹಾಸಿಗೆ ಬಿಟ್ಟು ಎದ್ದಿದ್ದಿಲ್ಲ, ಆವನ ಹೆಂಡತಿ ತಾಯಿತಾ ಕಟ್ಟಾವರನ್ನ, ಮಂತ್ರ ಮಾಡಾವರನ್ನ, ಹೇಳಕಿ ಹೇಳವರೆನ್ನ ಕರಿಸಿ ಪ್ರಯತ್ನ ಮಾಡಿದಳು. ಆದರೆ ಸುಧಾರಣೆಯಾಗಲಿಲ್ಲ. ಬಾಲಟ್ಯಾ ಮಾತಾಡದ ಹಾಸಿಗೆಮ್ಯಾಲೆ

ಬಿದ್ದಿದ್ದ. ಎರಡುಹೊತ್ತು ಚಲೊ ತಿನ್ನಲಿಕ್ಕೆ ಬೇಡತಿದ್ದ. ತುಪ್ಪಾ, ಹಾಲು, ಕುರಿ ಕೋಳಿ, ಸಕ್ಕರಿ ಕೇಳವ. ಅವನ ಸಮಾಧಾನವಾಗಲೆಂದು ಮನಿಯವರು ಅವನ್ನೆಲ್ಲ ಕೊಡತಿದ್ದರು, ತಿಂದರ ಪಚನವಾಗತಿರಲಿಲ್ಲ. ಹೀಂಗ ತಿಂದರ ತಾ ಮತ್ತ ಮೊದಲಿನ್ಹಾಂಗ ಗಟ್ಟಿಯಾಗತೇನಿ ತಿಳಿದಿದ್ದ. ಹೊಟ್ಯಾಗ ಇದಾವದೂ ಉಳಿಯದೆ ಏಳುವ ತ್ರಾಣನೂ ಬರಲಿಲ್ಲ.

ಬಾಳಾ ಬನಗರ ದೈವಕ್ಕ ಬಾಗಲಿಲ್ಲ, ಜನರು ಅವನನ್ನು ಇರುಕಿನಲ್ಲಿ ತಂದರೂ ಅವ ಹಣಿಯಲಿಲ್ಲ. ಜಿಗಟ ಬಾಳಾ ಶಟದ ಇದ್ದ,

ಶೇಕು ಮತ್ತು ಅವನ ಎತ್ತರವಾದ ಹೆಂಡತಿ ದುಡಿಯುತಾ ಇದ್ದರು. ಕಾರಭಾರಿ ಅಂಜೀ ಕಣ್ಣ ಹೊಡಕೊತ ಅಡ್ಡಾಡ್ತಿದ್ದಳು, ಚಿಕ್ಕಪುಟ್ಟ ಕಳವು ಮಾಡಿಕೊತ ಆನಂದ ಇದ್ದೆ ಇದ್ದ, ರಾಮಾ ಬನಗರ ಹಾಂಗ ಉಂಡಾಡಿಯಾಗಿ ಇದ್ದ. ವಾಸನೆಮ್ಯಾಲಿಂದ ತೋಳನ ಗುರ್ತಾ ಹಿಡಿಯೊ ಅವನ ಅಪ್ಪ ಕುರಿಹಿಂಡಿನ ಹಿಂದ ಹೋಗತಿದ್ದ. ತರುಣ ಹುಡುಗರು ಬೆಳಗಾಗೋದರೊಳಗ ಕುರಿಹಿಂಡ ಅಟಕೊಂಡು ಅಟವಿಗೆ ಹೋಗವರು. ದಿನವಿಡೀ ಕುರಿಮೇಯಿಸಿಕೊಂಡು ಸಂಜೆಹೊತ್ತು ಮನಿಗೆ ಬರಾವರು. ತಿರುಗಿಬಂದು ತಮ್ಮತಮ್ಮ ಕುರಿ ಜೋಡುಮಾಡಿ ದಡ್ಡಿ ಸೇರಸಾವರು. ರಾತ್ರಿ ಎಚ್ಚರದಿಂದ ಮಲಗಾವರು. ಕುರುಬರ ಹೆಣಮಕ್ಕಳು ರೊಟ್ಟಿ ಬಡಿಯಾವರು. ಉಣ್ಣೆ ನೂಲಾವರು, ಮಕ್ಕಳಿಗೆ ಹಾಲುಕುಡಿಸಿ ಮಲಗಸಾವರು.

ಹೀಂಗ ನಡಿದಿತ್ತು ವಾಡೀಜೀವನ. ಸರಕಾರಕ್ಕೆ ಬರೆದ ಪತ್ರದ ಉತ್ತರ ಬಂತು, ರಾಜೇಸಾಹೇಬರು ಸ್ವತಃ ಎಪ್ರಿಲ ಇಪ್ಪತ್ತನೇ ತಾರಿಖಿಗೆ ಬಂದು ಗರಡಿಮನಿ ಉದ್ಘಾಟನೆ ಮಾಡಲು ಒಪ್ಪಿದರು. ಒಮ್ಮೆಲೆ ಗಾಳಿ ಬದಲಾಯಿತು. ತಾಲೂಕಿನಿಂದ ವಾಡಿಗೆ ಬರುವ ರಸ್ತೆ ದುರಸ್ತಿಮಾಡಲಾಯಿತು. ಕಾಲುದಾರಿಯಲ್ಲಿ ಫಲಕಗಳು ಹಚ್ಚಲ್ಪಟ್ಟವು. ಮುನಸಿಪಾಲಿಟಿ ಜನ ಬಂದು ಬೀಡಾಡಿ ನಾಯಿ ಕೊಂದರು. ಅಲ್ಲಲ್ಲಿದ್ದ ತಿಪ್ಪಿ ತೆಗೆಯಲಿಕ್ಕೆ ಹೇಳಿದರು ಮತ್ತು ಅದನ್ನು ಅಮಲಿನಲ್ಲಿಯೂ ತಂದರು. ಸಾಲಿಕಟ್ಟಡ ದುರುಸ್ತಾಗಿ ಸುಣ್ಣ ಬಣ್ಣ ಕಂಡಿತು. ಕಸಾಕಡ್ಡಿ ಹೊಲಸುಗಳನ್ನೆಲ್ಲ ತಗಿಸಿ ಊರೆಲ್ಲ ಝಳಝಳ ವಾಯಿತು, ಊರಾಗ ಬರೋಮುಂದ ಎಲ್ಲ್ಯಾರ ರಾಮೋಶಿ ಗುಡಿಸಲ ಹೊಕ್ಕು ರಾಜಾ ನೋಡಬಹುದು. ಅದಕ್ಕ ಶ್ರಮಪಟ್ಟು ರಾಮೋಶಿ ಓಣಿ ಸ್ವಚ್ಛಮಾಡ ಲಾಯಿತು, ಪ್ರತಿಯೊಂದು ಮನಿಸಾರಿಸಿ, ರಾಮೋಶಿ ಜನರು ತಮ್ಮ ಮನಿ ನಿಚ್ಚಳ ಮಾಡಿದರು. ಬೀಳಾದ ಮನಿ ದುರುಸ್ತಿ ಕಂಡವು, ಮಣ್ಣು ಕಾಣದ ಮನಿ ಮೆತ್ತ ಲಾದವು. ಅಲ್ಲಲ್ಲಿ ಬಿದ್ದ ಕಲ್ಲುಗಳನ್ನು ಒಂದೆಡೆ ಕೂಡಿಸಿ ನೆಟ್ಟಗಿಟ್ಟರು. ಎಂದೆಂದೂ ಆಗದ ಕೆಲಸ ಆದವು. ಝಳಝಳ ಎರಕೊಂಡು, ಕೂದಲ ಬಾಚಿ, ಮೈತುಂಬ ಬಟ್ಟೆ ಹಾಕಿಕೊಂಡ ಕುರುಬರ ಹುಡುಗಿ ಹಾಂಗ ವಾಡಿ ಕಾಣಹತ್ತಿತು.

ಗರಡಿಮನಿ ಕೆಲಸವೂ ಮುಗಿಯುತ್ತ ಬಂದಿತು. ಗೋಡೆಗಳಾಗಿ ಅಡ್ಡಪಟ್ಟಿ ಉದ್ದಪಟ್ಟಿ ಹಾಕಿ ಆಗಿದ್ದವು. ಗೌಂಡಿ ಕೆಲಸ ಮುಗಿದಿತ್ತು. ಹೆಚ್ಚಾಗಿ ಉಳಿದದ್ದು ಬಡಿಗೇರ ಕೆಲಸ. ಅವರು ಹಲಗಿಗಳಿಗೆ ರಂಧಾ ಹೊಡೆಯುತಾ ಇದ್ದರು, ಗೂಟಗಳನ್ನು ಕೆತ್ತತಾ ಇದ್ದರು ಮತ್ತು ಬಾಗಿಲು ಚೌಕಟ ಕೂಡಿಸತಿದ್ದರು.

ಸ್ವತಃ ರಾಜಾ ತಮ್ಮ ಊರಿಗೆ ಬರತಾನ ಅನ್ನುವ ಕಲ್ಪನೆಯಿಂದ ಬನಗರವಾಡಿಯಲ್ಲಿ ಹೊಸ ಗಾಳಿ ಬೀಸಿತು; ಈ ಊರ ಒಬ್ಬ ಕುರುಬನೂ ರಾಜಾನ್ನ ನೋಡಿದ್ದಿಲ್ಲ. ಅವ ಬರವ ಇದ್ದ ಅಂತ ಯಾರೂ ಉದಾಸೀನರಾಗಿರಲಿಲ್ಲ. ಇದೊಂದು ಎಂದೆಂದೂ ಆಗದ ಘಟನೆಯಾಗಿತ್ತು. ಇದರಿಂದ ವಾಡಿಯಲ್ಲೆಲ್ಲ ಹೊಸ ಹುರುಪು ಬಂದಿತ್ತು. ಸುತ್ತುಮುತ್ತಲಿನ ಹಳ್ಳಿಯವರಲ್ಲಿ ಮತ್ಸರದ ಭಾವನೆ ಮೂಡಿತ್ತು. ಈ ಊರಿಗೆ ಎಂದೂ ಬಾರದ ಅಧಿಕಾರಿ, ಪಾಟೀಲ, ಕುಲಕರ್ಣಿ, ಫೌಜದಾರ ಎಲ್ಲರೂ ಬಂದುಬಂದು ಹೋಗಬೇಕಾಯಿತು. ದಿನಕಳೆದಂತೆ ಅನೇಕಬಾರಿ ಅವರಿಗೆ ಬರಬೇಕಾಗತಾ ಇತ್ತು. ನಮಗೂ ಬಹಳ ಗಡಿಬಿಡಿ; ಖುರ್ಚಿ, ಟೇಬಲ, ಹಾರ-ತುರಾಯಿ ತರೋದು. ಸಾಲಿ ಹುಡುಗರಿಗೆ ಹೊಸ ಅರಿವೆ ಹೊಲಿಸೋದು, ಊರಜನರಿಗೆ ಕಷ್ಟಾ ಮಾಡಿಸಿಕೊಳ್ಳಲು ಹೇಳೋದು ಇವೇ ಮೊದಲಾದ ಅನೇಕ ಚಿಕ್ಕಪುಟ್ಟ ಕೆಲಸಗಳಿದ್ದವು. ರಾಜಾ ಬರಾವ ಅಂದರ ಅನೇಕ ಮಾತು, ಭಾನಗಡಿ ಇರತಾವ. ಅವನ್ನೆಲ್ಲ ನಾವು ಓಡಾಡಿ ಪೂರೈಸತಾ ಇದ್ದೆವು.

ಏಪ್ರಿಲ ಇಪ್ಪತ್ತು ಮುಂಜಾನೆ ಎಂಟು ಗಂಟೆಗೆ ಉದ್ಘಾಟನ ಸಮಾರಂಭ. ಗರಡಿಮನಿ ಮ್ಯಾಲೆ ಛಪ್ಪರ ಬೀಳೋದಿತ್ತು, ಮುನ್ನಾದಿನ ಮಧ್ಯಾಹ್ನ ಮೂರಾಗಿದ್ದರೂ ಛಪ್ಪರ ಇದ್ದಿಲ್ಲ. ಉದ್ಘಾಟನ ಬಂದರೂ ಈ ಕೆಲಸ ಉಳಿದಿತ್ತು, ನಾನು ಹೌಹಾರಿ ಹೋದೆ. ಬೆಳಗಿನೊಳಗಾಗಿ ಈ ಕೆಲಸ ಮುಗಿಯದಿದ್ದರ ಮಹಾರಾಜರು ಏನನ್ನ ಬಹುದು. ನನ್ನ ಮಾನ ಹೋಗಿ, ವಾಡಿ ನಗೆಗೀಡಾಗಬಹುದು. ಹೀಂಗನಿಸಿ ನಾ ಕಾರಭಾರಿಗೆ ಅಂದೆ,

"ಮುಗೀತು, ನಮ್ಮೂರ ಮಾನ ಉಳಿಯೊದಿಲ್ಲ. ಗರಡಿಮನಿ ಛಪ್ಪರನ ಆಗಿಲ್ಲ. ಮ್ಯಾಲೆ ಮಣ್ಣುಬೀಳಬೇಕಾಗಿದೆ. ರಾಜಾ ಅನಕಾ ನಾಳೆ ಬೆಳಿಗ್ಗೆ ಬರವರು."

ಕಾರಭಾರಿ ಗಡಿಬಿಡಿಲೆ ಎದ್ದ ಅಂದ,

"ಆಂ! ಏನಂತಿದೇನು ಹುಡುಗ? ಕರಿ ಎಲ್ಲಾರನ, ಊರಕೂಡಿಸು. ಮಣ್ಣು ಕಲಸರಿ. ಮಣ್ಣಿನ ಛಪ್ಪರ ಹಾಕಾಕ ಎಷ್ಟೊತ್ತು?"

ಜನರನ್ನು ಓಡಾಡಿ ಕರಿದಾಯಿತು. ಊರಕೂಡಿತು. ಮಣ್ಣೂ ಕಲಸಿ ಆಯಿತು. ಕಲಸಿದ ಮಣ್ಣಿನ ಜಾಗಾದಿಂದ ಕಟ್ಟಡದ ವರೆಗೆ ಅರವತ್ತು ಎಪ್ಪತ್ತು ಆಳು ಸಾಲಕ ನಿಂತಿತು. ಮಣ್ಣು ಹಾಕಲಿಕ್ಕೆ ಸುರುವಾಯಿತು. ಬರಿಮೈ ಕುರುಬರು ಒಬ್ಬರ ಕೈಯಾಗಿಂದ

ಒಬ್ಬರು ಮಣ್ಣಿನ ಬುಟ್ಟಿ ತಗೊಂಡು, ಹೊತ್ತು ಮಣ್ಣ ಹಾಕಲಿಕ್ಕೆ ಹತ್ತಿದರು. ಸಮೀಪದ ಹಳ್ಳಿ ಢೋಲ ಬಾರಸಾವರನ್ನ ಕರಿಸಿದ್ದರು. ಅವರು ಢೋಲು ಬಾರಸತ ಇದ್ದರು, ಮತ್ತು ಅವರ ತಾಲಿನ ಮ್ಯಾಲೆ ಮಣ್ಣ ಹೊರೋದು, ಹಾಕೋದು ನಡೆದಿತ್ತು. "ಹಾ – ಹೂಂ – ತಗೊಳಲಿ ಮಣ್ಣು – ಹಾಕಲಿ ಮಣ್ಣು – ತಗೊ – ಬಂತಲಿ ಮಣ್ಣು" ಹೀಂಗನಕೊತ, ಒವರಿಕೊತ ಕೆಲಸ ಸಾಗಿತ್ತು. ಸಂಜಿ ಆತು, ರಾತ್ರಿ ಆತು, ಗ್ಯಾಸಬತ್ತಿ ತಂದು ಅದರ ಬೆಳಕಿನ್ಯಾಗ ಕೆಲಸ ಸಾಗೇಸಾಗಿತು. ಗದ್ದಲ ನಡದ ಇತ್ತು, ಊರಲ್ಲಿ, ಊರಹೊರಗೆ ತಳಿರುತೋರಣ ಕಟ್ಟೋದು ನಡೆದಿತ್ತು, ಎಲ್ಲ ಎತ್ತುಗಳನ್ನೂ ಒಂದುಕಡೆ ಕೂಡಿಸ್ಸಿದ್ದರು. ಅರಸ ಅಗಸಿಗೆ ಬಂದಮ್ಯಾಲೆ ಅವನ್ನ ಇಪ್ಪತ್ತೊಂದ ಯತ್ತಿನ ರಥ ದಾಗಿಂದ ಮೆರಸೊದಿತ್ತು. ಬಂದೋಬಸ್ತಿಗಾಗಿ ಬಂದ ಪೋಲೀಸರು ತಮ್ಮ ಅಧಿಕಾರದ ಪ್ರದರ್ಶನ ಮಾಡತಾ ಇದ್ದರು. ಏನಿದು ನಾಳೆ ಮುಂಜಾನೆ ಅರಸ ಬರಾವ, ಇನ್ನೂ ಏನೂ ತಯಾರಿನ ಇಲ್ಲಲ್ಲ? ಗ್ಯಾಸ ಹಚ್ಚಿ ಛಪ್ಪರದ ಕೆಲಸ ನಡೆದಿತ್ತು. ಮಣ್ಣಿನ ಬುಟ್ಟಿ ಹಿಡಿಯುತಾ ಓಡಿಯಂತಾ ಆಯುಬೂ ಕೆಳಗ ಕಲ್ಲರಾಶಿ ಮ್ಯಾಲೆ ಬಿದ್ದ. 'ಅಯ್ಯೋ ಸತ್ತೆ!' ಎಂದು ಬೀಳುವಾಗ ಅಂಜಿಕೆ ಬರೊಹಾಂಗ ಒದರಿದ. ಉದ್ಘಾಟನ ಸಮಾರಂಭದ ಕೆಲಸ ನಾನು ಸಾಲಿಯಲ್ಲಿ ಕೂತು ನಡೆಸಿದ್ದೆ. ರಾಮಾ ತಳಿರುತೋರಣದ ಕೆಲಸ ನಡೆಸಿದ್ದ, ಆಯುಬೂ ಬಿದ್ದಾಗ ನಾವ್ಯಾರೂ ಅಲ್ಲಿರಲಿಲ್ಲ. ಅವ ಬಿದ್ದ, ಎಚ್ಚರನೂ ತಪ್ಪಿತ್ತು. ಮಣ್ಣುಹಾಕುವ ಕೆಲಸ ನಿಂತಿತು. ಎಲ್ಲರೂ ಕೆಲಸ ಬಿಟ್ಟು ಆಯಂಬೂನ ಸುತ್ತ ನಿಂತರು. 'ಮುಲಾಣಿ ಸತ್ತ, ಮುಲಾಣಿ ಸತ್ತ' ಎಂಬ ಗದ್ದಲನ ಗದ್ದಲ. ಮೊದಲ ಗದ್ದಲ ನಡದ ಇತ್ತು, ಅದರಾಗ ಇದೊಂದು ಕೂಡಿತು. ಏನ ಗದ್ದಲ ನಮಗ ಗೊತ್ತ ಆಗಲಿಲ್ಲ. ಆನಂದ ಓಡಿಕೊತ ಬಂದು ಕಾರಭಾರಿಗೆ ಅಂದ,

"ಆಯುಬ್ಯಾ ಮುಲಾನಿ ಬಿದ್ದಾನ, ರಕ್ತ ಸೋರತದ!"

ಗರಡಿಮನಿ ಕೆಲಸ ನಿಂತದ್ದ ನೋಡಿ ಕಾರಭಾರಿ ಅಂದ,

"ನೀವ್ಯಾಕ ಇಲ್ಲಿ ನಿಂತೀರಿ? ಮುಲಾನಿ ಬಿದ್ದರ ಬೀಳುವಲ್ಲ ನ್ಯಾಕ. ನಡೆರಿ. ನಿಮ್ಮ ಕೆಲಸ ನೀವು ನಡೆಸಿರಿ."

ಹೀಂಗ ಹೇಳಿ ಜನರಿಗೆ ಮತ್ತ ಕೆಲಸಕ್ಕ ಕಳಿಸಿದ. ಆಯುಬೂನ್ನ ಅಮಾತ ಎತ್ತಿ ನನ್ನ ಕೋಣ್ಯಾಗ ಮಲಗಿಸಿದ. ಇತಲಾಗ ಕೆಲಸ ನಡದಿತ್ತು. ಇಷ್ಟರಾಗ ಫೋ–ಫೋ ಅನಕೊತ ರಾಜನ ಮೋಟರ ಬಂದಿತು. ಸಾಯಲಿಕ್ಕೂ ಯಾರಿಗೂ ಬಿಡುವಿದ್ದಿಲ್ಲ, ಅಂದಮ್ಯಾಲೆ ಆಲೋಸವಡು ಯಾರಿಗೆ? ಉಳ್ಳಾಗಡ್ಡೆ ಒಡೆದು ಆಯುಬೂನ ಮೂಗಿಗೆ ಹಚ್ಚಿದರು, ತಲಿಗೆ ನೀರು ಬಡೆದೆವು. ಆಯುಬೂ ಕಣ್ಣು ತಗಿಲಿಲ್ಲ. ಅವನ್ನ ಅಲ್ಲೆ ಬಿಟ್ಟು ಬಾಗಿಲ ಮುಂದಮಾಡಿ, ಕಾರಭಾರಿ ಮತ್ತ ಕೆಲಸ ಸುರುಮಾಡಿದ. ಇದೊಂದು ಮಹುಮೆಕಾರ್ಯ ಇದ್ದಾಂಗ ಇತ್ತು. ಹೆಣ ಮುಚ್ಚಿಟ್ಟಾದರೂ ಮುಗಸಬೇಕಾಗಿತ್ತು!

ಮಣ್ಣು ಒಗೆದದ್ದಾಯಿತ್ತು. ಮೈ ಲ್ಹಾಡಿ ಆದ ಕೆಲಸದವರೆಲ್ಲ ಲಗುಲಗು ಝುಳಕಾ ಮಾಡಲಿಕ್ಕೆ ಹೋದರು.

ನಾಕಾರು ರಾಮೋಶಿಯವರನ್ನ ತಾಲೂಕದ ರಸ್ತದ ವ್ಯಾಲೆ ಬಿಟ್ಟೆವು. ಕಾಳಿ ಬಾರಸಾವಗ ಒಂದು ಎತ್ತರದ ಗಿಡದ ವ್ಯಾಲೆ ಕೂಡಿಸಿದೆವು. ಅಲ್ಲಿಂದ ಮೈಲ ಎರಡು ಮೈಲು ದಾರಿ ಕಾಣತಿತ್ತು. ಮೋಟರ ಬರೊದು ಕಂಡಕೂಡಲೆ ಅವ ಕಾಳಿ ಬಾರಸೊದಿತ್ತು.

ಎಂಟು ಗಂಟೆ ಹೊತ್ತಿಗೆ ಕಾಳಿಬಾರಿಸಿದ. 'ಬಂದ, ನಮ್ಮ ರಾಜ ಬಂದ' ಎಂದು ಒಂದೇ ಗದ್ದಲ. ಬಗಲಾಗ ಹುಡುಗರನ್ನ ಕೂಡಿಸಿಕೊಂಡು ಕುರುಬರ ಹೆಣ್ಣುಮಕ್ಕಳು ಅಗಶಿಕಡೆಗೆ ಓಡಿದರು. ಬಂದೊಬಸ್ತಿಗಾಗಿ ಬಂದ ಪೋಲಿಸರು ಅವರನ್ನ ಬೆದರಿಸಿ ಕಳಿಸಿದರು. ರಥ ಸಜ್ಜಾಗಿ ನಿಂತಿತ್ತು. ಅದಕ್ಕ ಇಪ್ಪತ್ತೊಂದು ಎತ್ತೂ ಹೂಡಿದ್ದರು. ರಾಜಾ ಊರಿಗೆ ಬಂದ ಅಂದರ ಊರಗೌಡ ಒಂದು ಕಾಯಿ ಮತ್ತು ಒಂದು ರೂಪಾಯಿ ಬೆಳ್ಳಿತಾಟಿನಾಗ ಹಾಕಿ, ಅವನ್ನ ಇದುರುಗೊಂಬುವದಿತ್ತು; ಇಂಥ ಒಂದು ರೂಢಿ ಇತ್ತು. ಆದರ ನಮ್ಮೂರಿಗೆ ಗೌಡನೂ ಇದ್ದಿಲ್ಲ, ಕುಲಕರ್ಣೀನೂ ಇದ್ದಿಲ್ಲ. ನೆರೆಹಳ್ಳಿ ಗೌಡ ಬಂದ ಗದ್ದಲ ನಡೆಸಿದ್ದ. ನಾ ಅವನ ಬದಿಗಿರಿಸಿ, ಕೆಂಪು ಮುಂಡಾಸ, ಹೊಸ ನಿಲುವಂಗಿ ಹಾಕಿವ ಕಾರಭಾರಿಗೆ ಈ ಕೆಲಸ ಒಪ್ಪಿಸೋದು ಅಂತಾ ನಿರ್ಧರಿಸಿದೆ. ಅಗಶಿ ಹತ್ತರ ಸುಮಂಗಲೆಯರು ಆರತಿ ತಗೊಂಡು ನಿಂತಿದ್ದರು. ತುದಿಗಾಲ ವ್ಯಾಲೆ ನಿಂತು ಎಲ್ಲಾರೂ ಮೋಟರ ಬರೊ ದಾರಿ ನೋಡಕೊತ ನಿಂತಿದ್ದರು, ಹಾದಿ ವ್ಯಾಲೆ ನಿಲ್ಲಿಸಿದ ರಾಮೋಶ್ಯಾರು ಓಡಿಕೊತ ಬಂದು ಅಂದರು,

''ಮೋಟರ ಬಂತು, ಮಾವಲ್ಯಾಯಿ ದಿನ್ನಿ ಹತ್ತರ ಬಂದದ!''

ಎಲ್ಲಾರೂ ತಮ್ಮ ತಮ್ಮ ಪಟಕಾ, ಟೊಪಿಗಿ ಸರಿಪಡಿಸಿದರು. ಅಧಿಕಾರಿಗಳು ಕೋಟಿನ ಗುಂಡಿ ಹಾಕಿದರು. ಹಾದಿವ್ಯಾಲೆ ನಿಂತ ಪೋಲೀಸರು ಶೀಟಿ ಊದಿದರು. ಕೆಂಪು ಬೋರ್ಡ ಇದ್ದ ತಕತಕ ಹೊಳೆಯುತ್ತಿದ್ದ ಪಂತಸರಕಾರದ ಮೋಟರ ಅಗಶ್ಯಾಗ ಬಂದು ನಿಂತಿತು. ಅವರೊಡನೆ ಶಿಕ್ಷಣಾಧಿಕಾರಿಯೂ ಬಂದಿದ್ದ. ನಾನು ಗಡಿಬಿಡಿಯಿಂದ ಮುಂದಾದೆ. ನಾನು ಬಾಗಿ ನಮಸ್ಕಾರ ಮಾಡಿದೆ, ಆಗ ಶಿಕ್ಷಣಾಧಿಕಾರಿ ಅಂದರು,

''ಇವರು ಈ ಊರ ಶಿಕ್ಷಕರು.''

ತುಂಬಾ ಉಂಗುರಗಳಿದ್ದ ಕೈಜೋಡಿಸಿ ನಮಸ್ಕಾರ ಮಾಡಿ ರಾಜರಂದರು,

''ಜಯದೇವಾ.''

ಎಲ್ಲರೂ ಬಾಗಿನಿಂತರು. ಕುರುಬರು ಭೂಮಿಗೆ ಕೈಹಚ್ಚಿ ತಮ್ಮ ಅರಸನಿಗೆ ಅಭಿವಾದನೆ ಸಲ್ಲಿಸಿದರು.

ಮಾಮಲೆದಾರ ಮುಂದಾಗಿ ಆದರದಿಂದ ಅಂದರು,

"ಸರಕಾರ, ಇಲ್ಲಿಂದ ತಾವು ರಥದಲ್ಲಿ ಕೂತು ಮುಂದೆನಡೆಯಬೇಕೆಂದು ಊರವರ ನಮ್ರ ವಿನಂತಿ ಅದೆ........."

"ಅವರ ಇಚ್ಛೆ! ಹಾಗೇ ಆಗಲಿ."

ಸೇವಕನು ಮೋಟರ ಬಾಗಿಲು ತೆಗೆದ, ರಾಜರು ಹೊರಗೆ ಬಂದರು. ಕೆಂಪಗಿದ್ದ, ಭವ್ಯ ರಾಜನನ್ನು ಕುರುಬರು ಕಣ್ತುಂಬ ನೋಡಿದರು. ತಲೆಯ ಮೇಲೆ ಕೆಂಪು ಪಗಡಿ ಇತ್ತು. ಮೈಮ್ಯಾಲೆ ಉದ್ದ, ಬಿಳೀ ಖಾದಿಕೋಟು ಇತ್ತು. ಕಾಲಲ್ಲಿ ಬಿಳೀ ಸಲವಾರ. ಅಚ್ಚುಕಟ್ಟಾಗಿ ನೀಟಾಗಿ ಇಸ್ತ್ರಿಮಾಡಿದ ಜರತಾರಿ ಉಪರಣಿ. ಅವರ ಅಗಲಾದ ಎದೆಯ ಮೇಲೆ ಇತ್ತು. ನೀಟಾದ ಮೂಗು, ತೇಜಸುಳ್ಳ ಕಣ್ಣು. ಬಿಳಿ ಛಾಯೆ ಇದ್ದ ಮೀಸೆ. ಅರಸ ಕೋಲಿನ ಆಧಾರದಿಂದ ರಥದತ್ತ ರಾಜಠೀವಿಯಲ್ಲಿ ನಡೆದ. ಕುರುಬರ ಹೆಣ್ಮಕ್ಕಳು ತಮ್ಮ ತಮ್ಮೊಳಗ, "ಅರಸ ದಣದಾನ! ನಡಿಬೇಕಾರ ಕೋಲಿನ ಆಧಾರ ಬೇಕು!" ಅಂತ ಅನತಿದ್ದರು.

ನಾನು ಕಾರಭಾರಿಗೆ ಸೊನ್ನೆಮಾಡಿದೆ. ಅವ ಕಾಯಿ ರೂಪಾಯಿ ತಗೊಂಡು ಅದನ್ನ ಅರಸನ ಇದುರು ಹಿಡಿದ. ಅರಸ ಅದಕ್ಕ ಕೈಹಚ್ಚಿ. ಕಾರಭಾರಿ ಹೆಗಲಮ್ಯಾಲೆ ಕೈಇಟ್ಟು ಅಂದ,

"ಏನು ಗೌಡರೇ ಎಲ್ಲಾ ಕ್ಷೇಮವೇ?"

ಕಾರಭಾರಿ ನಸುನಕ್ಕು ಹೌದೆಂದು ಗೋಣು ಅಗಳಾಡಿಸಿ ಅಂದನು,

"ಹೌದು ಸರಕಾರ, ಹೌದು."

ಕಾರಭಾರಿ ಹೆಗಲಮ್ಯಾಲೆ ಕೈಯಿಟ್ಟು ಅರಸ ರಥ ಹತ್ತಿದ. ಅವನು ಕೂತಮ್ಯಾಲೆ ಸೊನ್ನೆಮಾಡಲಾಯಿತು. ರಥ ಮುಂದಸಾಗಿತು. ಕಾಳಿ ಹೊಡೆಯಲಾಯಿತು. ಸನಾಯಿ ಬಾರಿಸುತ್ತ ಮೆರವಣಿಗೆ ಮುಂದಸಾಗಿತು. ನೆರೆದ ಜನ ಅರಸನ ಜಯಜಯಕಾರ ಮಾಡುತ್ತಿದ್ದರು. ಹುಡುಗರು. "ಮಹಾರಾಜರಿಗೆ ಜಯವಾಗಲಿ!" ಎಂದನ್ನುತ್ತಿದ್ದರು. ಸುಮಂಗಲೆಯರು ಆರತಿಮಾಡುತ್ತಿದ್ದರು. ಅರಸ ಊರಿಗೆ ಬಂದ! ಮೂವತ್ತು ನಾಲ್ವತ್ತು ಗುಡಿಸಲಗಳಿದ್ದ ಊರಿಗೆ ಬಂದ!

ಗರಡಿಮನಿ ಬಾಗಿಲನ್ನು ರಾಜರು ತಮ್ಮ ಹಸ್ತದಿಂದ ತೆರೆದರು. ಬಜಂತ್ರಿ ಸನಾಯಿ ಬಾರಿಸಿದ. ಕಾಳಿ ಊದಲಾಯಿತು. ಆ ವಿಶಾಲ ಗರಡಿಮನಿ. ಕುಸ್ತಿಕಣ, ಅದರಲ್ಲಿಯ ಕೆಂಪುಮಣ್ಣು ಇವನ್ನೆಲ್ಲ ಕಂಡು ಅರಸನಿಗೆ ಸಂತೋಷವೆನಿಸಿತು. ಅವರಂದರು.

"ಎಲ್ಲಿದ್ದಾನ ಅವ ಮಾಸ್ತರ?"

ನಾನು ಕೈಮುಗಿದು ಬಾಗಿ ನಿಂತೆ.

"ಶಾಬಾಸ, ಒಳ್ಳೆ ಕೆಲಸ ಮಾಡಿದಿ ಹುಡುಗ! ನಿನ್ನ ಹೆಸರೇನು?"

"ರಾಜಾರಾಮ ವಿಠ್ಠಲ ಸಾಂದಣಿಕರ."

''ಇವ ನಮ್ಮ ಬಾರನಿಶಿ ಕಾರಕೂನ ವಿಠ್ಠಲ ಧೊಂಡೋಣ ಮಂಗ.'' ಮಾಮಲೆದಾರರು ಅಂದರು.

''ಹೀಗೋ! ಒಳ್ಳೆದು, ಜ್ಞಾನೋಪಾಸನೆ ಜೊತೆಗೆ ಬಲೋಪಾಸನೆಯೂ ಬೇಕು!'' ಎಂದು ರಾಜರು ಅಂದರು.

ಆನಂದದಿಂದ ನನ್ನ ಎದೆ ತುಂಬಿತು. ಮೈ ನವಿರೆದ್ದಿತು. ಗಂಟಲ ತುಂಬಿ ಬಂದಿತು. ಆನಂದಾಶ್ರು ಬರುವಂತೆನಿಸಿತು.

ಗರಡಿಮನಿ ಹನಮಂತದೇವರಿದುರು ಮಹಾರಾಜರು ಕಾಯಿ ಒಡೆದರು. ಆಮೇಲೆ ಸಭೆ ಪ್ರಾರಂಭವಾಯಿತು. ನನ್ನ ಭಾಷಣವನ್ನು ನಾನು ಓದಿದೆನು. ಅದನ್ನು ಸ್ಪಷ್ಟವಾಗಿ ಓದಿದೆನು. ಓದುವಾಗ ಎದಿ ಡವಡವ ಅನ್ನುತಿತ್ತು.

ಆಟಕ್ಕೆಂದು ಎಲ್ಲರೂ ಒಂದುಕಡೆ ಸೇರಬೇಕು ಮತ್ತು ಆಟದೊಡನೆ ಅಭ್ಯಾಸದ ರುಚಿಯೂ ಬೆಳೆಯಬೇಕು ಎಂಬ ಘನ ಉದ್ದೇಶವನ್ನು ಇಟ್ಟುಕೊಂಡು ನಾವು ಗರಡಿಮನಿ ಕಟ್ಟುವ ಕೆಲಸವನ್ನು ಕೈಕೊಂಡೆವು. ಊರಿನ ಜನರು ಈ ಕೆಲಸದಲ್ಲಿ ತೋರಿದ ಉತ್ಸಾಹ ಮತ್ತು ಮಾಡಿದ ಕೆಲಸ ಕೌತುಕಾಸ್ಪದವಾಗಿವೆ. ಅವರು ತೋರಿದ ಐಕ್ಯವು ಶ್ಲಾಘನೀಯವಾಗಿದೆ, ಹೀಗೆ ಹೇಳಿ ಕೊನೆಗೆ ನಾನು ರಾಜರ ಆಶೀರ್ವಾದಗಳನ್ನು ಕೋರಿದೆ.

ರಾಜೇಸಾಹೇಬರು ಎದ್ದು ಚಿಕ್ಕ ಭಾಷಣವನ್ನು ಮಾಡಿದರು. ಅವರಂದರು, ''ನನ್ನ ಕುರುಬ ಪ್ರಜೆಗಳು ಇಂಥ ತಮ್ಮ ವಸತಿಯಲ್ಲಿ ಇಂಥ ಸುಂದರವಾದ ಗರಡಿಮನಿ ಕಟ್ಟಿದ್ದನ್ನು ನೋಡಿ, ಅಭಿಮಾನದಿಂದ ನನ್ನ ಎದಿ ತುಂಬಿಬಂದಿದೆ. ನನಗಾದ ಆನಂದವನ್ನು ತೋರದೆ ಇರಲಾರೆ. ಜ್ಞಾನ ಸಂವರ್ಧನೆ ಮತ್ತು ಬಲೋಪಾಸನೆ ಇವೆರಡೂ ನನ್ನ ಸಂಸ್ಥಾನದ ಧ್ಯೇಯಗಳಾಗಿವೆ. ನನ್ನ ಸಂಸ್ಥಾನದ ವಿದ್ಯಾರ್ಥಿಗಳ ಎದೆ ವಿಶಾಲವಾಗಿರಬೇಕು, ತೋಳು ಸಮರ್ಥವಾಗಿರಬೇಕು ಮತ್ತು ಬುದ್ಧಿ ಚುರುಕಾಗಿರಬೇಕು. ಈ ಮಾತು ನಾನು ಆಗ್ರಹಪೂರ್ವಕವಾಗಿ ಹೇಳತಾ ಇದ್ದೇನೆ. ಈ ಮಾತು ನನ್ನ ಕುರುಬ ಪ್ರಜೆಗಳ ಕಿವಿ ಮುಟ್ಟಿರಬೇಕೆಂದೆನಿಸಲಿಲ್ಲ. ಆದರೆ ಆ ಮಾತು ಅವರತನಕ ಮುಟ್ಟಿದೆ ಇಷ್ಟೇ ಅಲ್ಲ, ಅದು ಅವರಿಂದ ಕೃತಿಯಲ್ಲಿಳಿದಿದೆ, ಇದನ್ನು ಕಂಡು ನನಗೆ ಆಶ್ಚರ್ಯವಾಗಿದೆ. ನಿಮ್ಮ ರಾಜನ ಎದೆ ಎರಡಂಗುಲ ಅಗಲಾದಂತೆ ಆಗಿದೆ. ಜಗದಂಬೆ ನಿಮಗೆ ಸದ್ಬುದ್ಧಿ ಕೊಡಲಿ ಮತ್ತು ನಿಮ್ಮ ಕಲ್ಯಾಣವನ್ನು ಬಯಸಲಿ.''

ನಾನು ಆಭಾರ ಮನ್ನಿಸಿದೆ. ಎಲ್ಲರ ಆಭಾರಗಳನ್ನು ಹೃತ್ಪೂರ್ವಕವಾಗಿ ಮನ್ನಿಸಿದೆ. ಮಕ್ಕಳು 'ವಂದೇ ಮಾತರಮ್' ಅಂದಮೇಲೆ ಸಮಾರಂಭವು ಮುಕ್ತಾಯಗೊಂಡಿತು. ರಾಜರ ಮೋಟರ ಧೂಳ ಆರಿಸುತ್ತ 'ಫೋಂಫೋಂ' ಎಂದು ಹೋಯಿತು. ಮನೆಮನೆಯಲ್ಲಿ ರಾಜಾ ಹ್ಯಾಂಗ ಇದ್ದಾನ, ಹ್ಯಾಂಗ ಮಾತಾಡಿದ, ಹ್ಯಾಂಗ ಕಂಡ ಇದರ ಮಾತ ಮಾತು. ಅರಸ ಬಂದ ಸಮಾರಂಭವು ಮುಗಿಯಿತು. ಆದರೆ ಕುರುಬರ ಆನಂದ

ಸಂತೋಷ ಕಡಿಮೆಯಾಗಲಿಲ್ಲ. ಅವರು ಅದನ್ನು ಗುಂಪುಗುಂಪಾಗಿ ನಿಂತು ಚರ್ಚೆಮಾಡಿ ತೋರತಾ ಇದ್ದರು. ಈ ಆನಂದ ಸಂತೋಷಗಳ ನೆನಪು ಅನೇಕದಿನ ಸಾಕಾಗುವಂತಿತ್ತು.

ದಾದೂ ಬಾಲಟ್ಯಾ ಮತ್ತು ಬಾಳಾ ಬನಗರ ಇವರಿಬ್ಬರೂ ಸಮಾರಂಭಕ್ಕೆ ಬರಲಿಲ್ಲ, ಬಾಳಾಗ ರಾಜಾ ಬರತಾನ ಅನ್ನೋದು ಗೊತ್ತಿತ್ತು. ಯಾರೋ ಅವಗ ರಾಜಾನ ನೋಡಲಿಕ್ಕೆ ನಡಿ ಅಂತ ಅಂದಾಗ, ''ರಾಜಾ ಬಂದರ ಬಂದಿದ್ದಾನು, ನನ್ನ ಕೆಲಸ ಬಿಟ್ಟು ನಾ ಯಾಕ ಬರಲಿ. ನನ್ನ ಹೊಟ್ಟಿಗೆ ಅವ ಏನಾರ ಕೊಡತಾನೇನು?'' ಅಂತ ಅವ ಅಂದನಂತ.

ಬಾಲಟ್ಯಾ ಬರಬೇಕೆಂದ ಚಡಪಡಿಸತಿದ್ದ. ಆದರ ಅವಗ ಏಳಾಕ ಬರತಿದ್ದಿಲ್ಲ. ಕಾರಭಾರಿನ್ನ ಮನೆಗೆ ಕರಿಸಿ,

"ರಾಜಾನ್ನ ನೋಡಬೇಕು, ನನ್ನ ಹೆಗಲಮ್ಯಾಲೆ ಕೂಡಿಸಿ ಒಯ್ಯಿರಿ" ಅಂತ ಹೇಳಿದ.

ಆದರೆ ಕಾರಭಾರಿ ಮನಸಿಗ್ಯಾನ ಬ್ಯಾನಿ ಬೇರೆ ಇತ್ತು. ಈ ಖೋಡಿ ಏನಾರ ಮಾತಾಡಿ ತನಗ ಹೊಡೆದದ್ದನ್ನು ಹೇಳಿ ಸಮಾರಂಭ ಕೆಡಸ್ಯಾನು. ಅದಕ್ಕ ಅವಗ ಯಾರೂ ಬರಗೊಡಲಿಲ್ಲ. ಬಾಲಟ್ಯಾ ಎಲ್ಲಾರಿಗೆ ಬೈದ, ಒದರಿದ ಆದರ ಯಾರೂ ಅವನ ಕಡೆ ಗಮನ ಕೊಡಲಿಲ್ಲ,

ಸಮಾರಂಭ ಮುಗದ ಮ್ಯಾಲೆ ನನಗ ಆಯಂಬೂ ಬಿದ್ದದ್ದು ಬಂದ ಹೇಳಿದರು. ಅವಗ ಭಾರಿ ಪೆಟ್ಟ ಬಿದ್ದಿತ್ತು. ನನ್ನ ಕೋಣ್ಯಾಗ ಇಟ್ಟಾರಂತ ತಿಳಿತು. ನನಗಾದ ಆನಂದದ ಮ್ಯಾಲೆ ತಣ್ಣೀರು ಎರಚಿದಾಂಗ ಆತು. ನಾನು ಬೆದರಿ ಕೋಣೆಯತ್ತ ಓಡಿದೆ, ಚಿಲಕಾ ತಗದು ಒಳಗೆ ಹೋದೆ, ಮುಖ ಕೆಳಗಮಾಡಿ ಆಯಬೂ ಬಿದ್ದಿದ್ದ. ನನ್ನ ಎದಿ ಡವಡವ ಅನ್ನಲಿಕ್ಕೆ ಹತ್ತಿತು. ರಾಜಾ ಊರಿಗೆ ಬರಲಿಕ್ಕೆ, ಆಯಂಬೂನ ಬಲಿದಾನ ಮಾಡಬೇಕಾಯಿತೇ? ನಾನು ಜೋರಿಲೆ ಒದರಿದೆ,

''ಆಯಬೂ, ಆಯಬೂ, ಎಚ್ಚರಿದ್ದಿ ಅಲ್ಲ....?''

ಅವನ ಮುಖ ಮ್ಯಾಲೆ ಮಾಡಿದೆ. ಕಣ್ಣ ತೆರೆದು ನನ್ನ ಕಡೆ ನೋಡಿದ. ಅವನು ತೀರ ಕ್ಷೀಣವಾಗಿ ಉಸಿರಾಡಿಸುತ್ತಿದ್ದ. ಅದರ ಉಷ್ಣತೆ ನನ್ನ ಗಲ್ಲಗಳಿಗೆ ಅನಿಸಿತು, ಒಮ್ಮೆ ಕಣ್ತೆರೆದು ಮತ್ತೆ ಮುಚ್ಚಿ ನಿಟ್ಟುಸಿರು ಬಿಟ್ಟ. ''ಆಯಬೂ, ಭಾರಿ ಪೆಟ್ಟು ಹತ್ತಿತೇನು? ಆಯಂಬೂ, ಅಯಂಬೂ ಏನಾಗಿದೆ?'' ಆಯಂಬೂ ಮತ್ತೆ ಕಣ್ತೆರೆದು ಕ್ಷೀಣ ದನಿಯಲ್ಲಿ ಅಂದ,

''ಮಾಸ್ತರ, ರಾಜಾ ಬಂದನೇನು?''

'ಬಂದ, ಅಷ್ಟ ಅಲ್ಲ ಬಂದ ಹೋದ. ನಿನಗೇನಾಗ್ಯದ? ಹ್ಯಾಂಗ ಬಿದ್ದಿ?'' ಆಯಂಬೂಗ ಬಹಳ ದುಃಖವಾಯಿತು. ''ರಾಜಾ ಬಂದ ಆದರ ನನಗ ನೋಡಲಿಕ್ಕೆ ಸಿಗಲಿಲ್ಲ.........'' ಮತ್ತೆ ಕೆಳಗ ಮಾರಿಮಾಡಿ ಬಿದ್ದ.

ರಾಜಾ ಬಂದು ಹೋದ. ಗರಡಿಮನಿ ಸುರುವಾಯಿತು. ಅನೇಕ ತಿಂಗಳ ನಡೆದ ಕೆಲಸ ಒಮ್ಮೆ ಮುಗಿಯಿತು. ಊರ ಹುಡುಗರು ವ್ಯಾಯಾಮ ಮಾಡಲು, ಕುಸ್ತಿ ಕಲಿಯಲು, ಆಟಪಾಟವಾಡಲು ಗರಡಿಮನಿಗೆ ಬರಹತ್ತಿದರು. ಉಠಾಬೈಸು, ಲೆಝಿಮು, ಲಾಠಿ, ದಾಂಡಪಟ್ಟಾ ಮೊದಲಾದ ಆಟ ಸುರುವಾದವು. ಊರೊಳಗೆ ಅಲ್ಲಲ್ಲಿ ಇದ್ದ ವ್ಯಾಯಾಮದ ಸಾಮಾನವನ್ನೆಲ್ಲ ಗರಡಿಮನಿಗೆ ತರಲಾಯಿತು. ನಡುವಯಸ್ಸಿನವರೂ ಕೆಲವರು ಕೆಂಪುಮಣ್ಣಿನಲ್ಲಿ ಉರುಳಾಡಹತ್ತಿದರು. ಸಾಲಿಯೂ ಹೆಚ್ಚು ನೆಟ್ಟಗೆ ನಡೆದು, ತಪ್ಪದೆ ಇಪ್ಪತ್ತು ಹುಡುಗರು ಬರಹತ್ತಿದರು.

ಬಿದ್ದದ್ದರಿಂದ ಆಯುಬೂನ ಕೈಎಲುಬು ಮುರಿದಿತ್ತು. ಅವಗ ತಾಕಿದ ಪೆಟ್ಟೂ ಭಾರಿ ಇತ್ತು. ಅವನ ಮುರಿದ ಎಲುಬು ಕೂಡಿಸಲು ಆನಂದ ಒಬ್ಬ ರಾಮೋಶಿನ್ನ ಕಳಿಸಿದ್ದ. ಅವನ ಹೆಸರು ಜಗನ್ಯಾ, ಕಾಣಲಿಕ್ಕೆ ಒಳೆ ಚಂದ ಮತ್ತು ಉತ್ಸಾಹಿ ಆಳು. ಅವ ದಿನಾ ಬಂದು ಆಯುಬೂನ ಕೈ ತಿಕ್ಕತಿದ್ದ. ಇವ ತಮ್ಮ ಅಪ್ಪನಿಂದ ಎಲುಬು ಕೂಡಿಸುವ ಕಲೆಯನ್ನು ಕಲಿತಿದ್ದ. ಹೀಂಗ ಆನಂದ ಹೇಳಿದ್ದ. ಜಗನ್ಯಾನ ಅಪ್ಪ ಅಂದರ ವಾಡ್ಯಾಗಿನ ಹೆಸರಾದ ಬ್ಯಾಟಿ ಆಡಾವ. ಹೊಟ್ಟಿಮ್ಯಾಲೆ ಸರಕೊತ ಹೋಗಿ ಬಂದೂಕಿಲೆ ಚಿಗರಿ ಹೊಡೆಯುತಿದ್ದ. ಅವ ಬಹಳಷ್ಟು ಚಿಗರಿ ಹೊಡೆದಿದ್ದ. ನಾಲ್ಕು ಖಣದ ಮನಿ ತುಂಬೊವಷ್ಟು ಚಿಗರಿ ಕೋಡು ಅವನಲ್ಲಿದ್ದವು. ಮುಪ್ಪಿನ ಮುದುಕ ಆದ ಮ್ಯಾಲೆ ಭೂಮಿಗೆ ಬಿದ್ದು ಚಿಗರಿ ಹಾಂಗ ಚೀರಾಡಾವ. ನೂರಾರು ಚಿಗರಿ ಹೊಡೆದ ಈ ತಾತ್ಯಾಬಾ ರಾಮೋಶಿ ಕೊನೆಗೆ ಚಿಗರಿ ಹಾಂಗ ಒದರಾಡಿ ಚೀರಾಡಿ ಪ್ರಾಣಾಬಿಟ್ಟ!

ಆಯುಬೂನ ಎಲುಬು ಸರಿಯಾಗಿ ಕೂತಿತು. ಜಗನ್ಯಾ ಕೈ ತಿಕ್ಕಿತಿಕ್ಕಿ ಸರಿಮಾಡಿದ. ಪೆಟ್ಟುತಿಂದ ಮೈ ಸಡಿಲಾಗಿ ಆಯುಬೂ ಹದಿನೈದು ದಿನದಾಗ ಅಡ್ಯಾಡಲಿಕ್ಕೆ ಹತ್ತಿದ. ಮುಲಾಣಿ ಸತ್ತಸತ್ತ ಉಳಿದ. ಇದೆಲ್ಲ ನಡೆದಾಗ ಜಗನ್ಯಾ ನಡುವ ಒಂದು ದೊಡ್ಡ ಭಾನಗಡಿ ಮಾಡಿದ್ದ. ಊರಿಗೆ ಮೂಳ ಆಗಿ, ಅದನ್ನ ಮುಗಿಸಬೇಕಾರ ಸಾಕಸಾಕಾಯಿತು.

ಬನಗರವಾಡಿಯಿಂದ ನಾಲ್ಕಾರು ಹರದಾರಿ ಮ್ಯಾಲೆ ವಾಂಗೀ ಅಂತ ಒಂದ ಊರಿತ್ತು. ಇಡೀ ತಾಲೂಕಿನ್ಯಾಗ ಗುಂಡಾ ಅಂತ ಪ್ರಸಿದ್ಧ ಊರು. ಖೂನು, ಹಾಣಾಹಾಣೆಗೆ ಎತ್ತಿದ ಕೈ, ಪರಊರವರು ಆ ಊರಿಗೆ ಹೋದರ ಜೀವಾ ಕೈಯಾಗ ಹಿಡಕೊಂಡು ಹೋಗಾವರು. ಸಾಲಿಮಾಸ್ತರ, ತಲಾಟಿ — ಎಲ್ಲರೂ ಈ ಊರಿಗೆ ಬದಲಿ ಆಗ್ಯದ ಅಂದರ ಅಂಜಿ ನಡಗಾವರು. ವಸೂಲಿಗೆ ಹೋದ ಮಾಮಲೆದಾರನೂ ನಾಲ್ಕು ಸವಿಮಾತ ಆಡಿ ತಿರುಗಿ ಹೋಗಾವ, ಭಿಕ್ಷಾದವರ್ಹಾಂಗ ಸರಕಾರಿ ಹಪ್ತೆ ಕೇಳಾವ. ಕೆಲಸಕ್ಕಂತ ಜಗನ್ಯಾ ವಾಂಗಿಗೆ ಮ್ಯಾಲಿಂದಮ್ಯಾಲೆ ಹೋಗತಿದ್ದ.

ಒಂದು ದಿನ ಮಧ್ಯಾನ್ನದಾಗ ಎಂಟ ಹತ್ತು ಟೊಣ್ಯಾರು ವಾಡೀ ಸೇರಿದರು. ಇವರ ಕೈಯಾಗ ಲಾಠಿ, ಕೊಡ್ಲಿ, ಬರಚಿ ಇದ್ದವು. ಉದ್ದನ ಪಟಕಾ ಸುತಗೊಂಡು, ಮಲಮಲ ಅಂಗಿ ಹಾಕ್ಕೊಂಡು ಈ ಗುಂಡಾಜನರು ವಾಡೀ ಸೇರಿ, ಸರಳ ರಾಮೋಶಿ ಓಣಿಗೆ ಹೋದರು. ಎಲ್ಲ ಗುಡಿಸಲದಾಗ ಹೊಕ್ಕು ಹುಡುಕಿದರು. ಹೆಣ್ಣಾಳುಗಳನ್ನು ಬೆದರಿಸಿದರು. ಒಬ್ಬಿಬ್ಬ ರಾಮೋಶಿಯರಿಗೆ ಕೊಡ್ಲಿಕಾವಿಲೆ ಹೊಡೆದರು. ರಾಮೋಶಿ ಓಣ್ಯಾಗ ಚೀರಾಟ, ಒದರ್‍ಯಾಟ ಕೇಳಿಸಿತು. ಬೆದರಿದ ಹೆಣಮಕ್ಕಳು, ಹುಡುಗರು ಸಾಲಿಕಡೆಗೆ ಆಶ್ರಯಕ್ಕೆ ಬಂದರು. ಕುರುಬರು ಅಡವಿಗೆ ಹೋಗಿದ್ದರು. ದೊಡ್ಡವರು ಯಾರೂ ಊರಾಗ ಇದ್ದಿಲ್ಲ. ಇಂಥಾದರಾಗ ಈ ಗುಂಡಾ ಜವಾನರು ಗುಡಿಸಲ ಗುಡಿಸಲ ಹೊಕ್ಕು ಏನೋ ಹುಡುಕತಾ ಇದ್ದರು.

ನಾನು ಸಾಲ್ಯಾಗಿದ್ದೆ. ಆನಂದನೂ ಅಲ್ಲೆ ಇದ್ದ. ತಮ್ಮ ಓಣ್ಯಾಗ ಯಾರೋ ಹೊಕ್ಕಾರ ಅಂತ ಕೇಳಿ ಅವ ಅತಲಾಗ ಓಡಿದ. ನಾನೂ ಸಾಲಿಯಿಂದ ಅಲ್ಲೆ ಹೋದೆ.

ಅಷ್ಟರಾಗ ಗುಡಿಸಲ ಹುಡುಕೋದು ಮುಗಿಸಿ ವಾಂಗಿ ಜವಾನರು ರಸ್ತೆದಾಗ ಬಂದ ನಿಂತಿದ್ದರು. ಆನಂದ ಮುಂದೆ ಬಂದು ಅಂದ.

''ಏನು ಗಡಿಬಿಡಿ ನಡಿಸೀರಿ?''

ಇವರು ವಾಂಗೀ ಜನರೆಂದು ಅವ ಆಗಳೆ ತಿಳಕೊಂಡಿದ್ದ. ಆನಂದ ಹೀಂಗ ಕೇಳಿದೊಡನೆ ಅವರಲ್ಲಿ ಒಬ್ಬವ, ಅವನಮ್ಯಾಲೆ ಏರಿಹೋದ ಮತ್ತ ಅಂದ,

''ನೀ ರಾಮೋಶಿ ಹೌದಲ್ಲೊ?''

ಆನಂದ ಹೌದ ಅಂದಕೂಡಲೆ, ಅವನ್ನ ಎರಡು ಏಟು ಲಾಠಿಲೆ ಹೊಡೆದು ಮ್ಯಾಲೆ ಬೈದು ಅಂದ,

''ಜಗನ್ಯಾ ಎಲ್ಲಿ ಅದಾನ?''

ಲಾಠಿ ಹೊಡೆತ ತಾಳಿ ಜಾಗಾ ಬಿಡದ ಆನಂದ ಅಂದ,

''ಯಾಕ? ಅವ ಏನು ಮಾಡ್ಯಾನ?''

ಇದನ್ನ ಕೇಳಿ ಅವ ಆನಂದಗ ಇನ್ನೊಂದು ಏಟು ಬಿಗಿದ. ನನಗೆ ಇದೆಲ್ಲ ತಡಿಯೊದು ಆಗಲಿಲ್ಲ. ನಾ ಮುಂದ ಬಂದು ಆ ಹುಡುಗನ್ನ ಹಿಡಿದು ಕೇಳಿದೆ,

''ನಿವ್ಯಾರು? ಎಲ್ಲಿ ಅವರು? ಒದ್ಮ್ಯಾಲೆ ಊರಹೊಕ್ಕು ಬಡಿದಾಟಕ್ಕ ಸುರು ಯಾಕ ಮಾಡೀರಿ? ನಿಮಗೆ ಯಾರ ಕೇಳವರ ಇಲ್ಲೇನು?''

ಹಾಂಗ ನೋಡಿದರ ನಾನು ಚಿಲ್ಲರ ಆಳು. ಆದರ ನಾನು ಈ ಮಾತು ಒಳೇ ಧೈರ್ಯದಲೆ ಆಡಿದೆ. ಒಂದು ಕ್ಷಣ ತನ್ನ ಕೈ ಬಿಡಿಸಿಕೊಳ್ಳೋದು ಆ ಹುಡುಗಗ್ಗ ಆಗಲಿಲ್ಲ.

ಹಿಂದಾಗಡೆ ಅವರಲ್ಲಿಯುವ ಗಿಡ್ಡ, ಲಠ್ಠ ಆಳು ಮುಂದ, ಆ ಹುಡುಗನ್ನ ಒಂದು ಬದಿಗೆ ಜಗ್ಗಿ, ನನ್ನ ಎದಿಗೆ ಎದೆಹಚ್ಚಿ ಅಂದ,

"ನೀ ಯಾರೋ? ಒಳೇ ಜೋರಿಲೆ ಮಾತಾಡತೀದಿ!"

"ನಾನು ಸರಕಾರಿ ನೌಕರನಿದ್ದೇನೆ. ಈ ಊರ ಸಾಲಿಮಾಸ್ತರ ನಾನು. ನಿಮಗ್ಯಾರ ಬೇಕು, ಏನು ಬೇಕು, ಸರಳವಾಗಿ ಕೇಳಿರಲ್ಲ. ಹೊಡೆದಾಟ ಮಾಡಲಿಕ್ಕೆ ಇದೇನು ಮೊಗಲಾಯಿ ಅಲ್ಲ!"

ಅಷ್ಟರಾಗ ಮುರಕ ಕೈಯಾಗ ಲಾಠಿ ಹಿಡಕೊಂಡು ಆಯುಬೂ ಬಂದ. ಗಟ್ಟ್ಯಾಳ್ಳ ನಾಲ್ಕಾರು ಹುಡುಗರು ಗರಡಿಮನಿಯಿಂದ ಲಾಠಿ ತಗೊಂಡು ಬಂದ ನಿಂತರು,

ನನ್ನ ಎದಿಗೆ ಎದಿಕೊಟ್ಟು ನಿಂತವ ಈ ವಾತಾವರಣ ಕಂಡು ಸ್ವಲ್ಪ ಹಿಂಜರಿದ; ಮೂಗ ಉಬ್ಬಿಸಿ ಅಂದ,

"ನಮಗ ಜಗನ್ಯಾ ಬೇಕಾಗ್ಯಾನ."

"ನಾಲ್ಕಾರು ದಿನ ಆಗ್ಯಾವ, ಅವ ಊರಾಗ ಇಲ್ಲ" ನಾ ಹೇಳಿದೆ.

"ನೀ ಹೇಳೊ ಮಾತು ಹ್ಯಾಂಗ ಖರೆ ಅವ ಅಂತೀವಿ."

"ನಾನು ಹೇಳತೇನಿ ಅಂತ."

"ಏ ಮಾಸ್ತರಾ, ರಗಡ ಸೊಕ್ಕು ತುಂಬ್ಯೈತಿ ನಿನ್ನ ಮೈಯಾಗ!"

ಅಷ್ಟರಾಗ ವಾಡ್ಯಾಗಿನ ಮುದಕಿ ಒಬ್ಬಾಕಿ ಬಂದು, ಆ ಪಟಕಾ ಸುತ್ತಿದವನ ಗದ್ದಾ ಹಿಡಿದು ಅಂದಳು,

"ಅಯ್ಯೊ ನನ್ನ ಮಗನಽಽ ಈ ಬಡ ರಾಮೋಶ್ಯಾರ ಮ್ಯಾಲೆ ಯಾಕೊ ನಿನ್ನ ಕೊಡ್ಲಿ ಬರ್ಚಿ ನಡಸತಿ? ಛಪ್ಪನ್ನ ಕುಳಿ ಮರಾಠಾ ನೀನು! ರಾಮೋಶ್ಯಾರು ನಿನ್ನ ಕಾಲಾಗಿನ ಚಂಡು ಇದ್ದಾಂಗ.... ಆಂ! ನೆಟ್ಟಗ ಕೂಡು. ಬಿಸಲಾಗ ಬಂದೀದಿ. ಒಂದಿಷ್ಟು ನೀರು ಕುಡಿ. ಏನು ಬೇಕು ಅದನ್ನ ಮಾಸ್ತರಗ ಹೇಳು."

ಆಮ್ಯಾಲೆ ರಾಮೋಶಿ ಹೆಣಮಕ್ಕಳೂ ಬಂದರು. ವಟಾವಟಾ ಒಂದಳತಿ ಮಾತಾಡಹತ್ತಿದರು. ಕುರುಬರ ಹೆಣಮಕ್ಕಳು ಬಂದು ವಾಂಗೀ ಜನರನ್ನು ಬಯಲಿಕ್ಕೆ ಹತ್ತಿದರು.

ನಾ ಈ ಜನರಿಗೆ ಅಂದೆ,

"ಗರಡಿಮನಿ ಕಡೆ ನಡೀರಿ. ನೀವು ಯಾಕ ಬಂದೀರಿ, ನಿಮಗೇನು ಬೇಕು ಇದನ್ನೆಲ್ಲ ಕೂತು ಮಾತಾಡೋಣು. ಸುಮ್ಮನ ಬಂದು ಬಡದಾಟಕ್ಕ ನಿಲ್ಲೋದು ನಿಮ್ಮಂಥವರಿಗೆ ಶೋಭಿಸುದಿಲ್ಲ."

ಅವರಿಗೆ ಏನ ಅನಿಸಿತೊ ಏನೋ 'ನಡಿರಿ' ಅಂದರು. ಹಾಗೆ ಎಲ್ಲರೂ ಗರಡಿಮನಿ ಕಡೆಗೆ ನಡೆದೆವು. ಹೆಣಮಕ್ಕಳು ಹುಡುಗರು ಬೆನ್ನಹತ್ತಿದರು. ನಾ ಅವರನ್ನು ಬೆದರಿಸಿದೆ. ಅವರು ತಿರುಗಿ ಹೋದರು. ನಾನು, ಆನಂದ, ರಾಮಾ ಮತ್ತು ಅವರೆಲ್ಲರೂ ಕೂಡಿ ಗರಡಿಮನಿಗೆ ಹೋಗಿ ಕೂತೆವು.

"ನಿಮಂಗ ಏನು ಹೇಳೋದು ಕೇಳೋದುಂ ಅದ ಅವನ್ನೆಲ್ಲ ಹೇಳರಿ" ನಾ ಅಂದಿ.

ಅವರಲ್ಲಿ ಒಬ್ಬವ ಅಂದ.

"ನಮ್ಮೂರು ವಾಂಗೀ. ನಿಮ್ಮೂರ ಜಗನ್ಯಾ ನಮ್ಮೂರ ಒಬ್ಬ ರಂಡಿಮುಂಡಿನ್ನ ಓಡಿಸಿಕೊಂಡ ಹೋಗ್ಯಾನ. ಅವರನ್ನ ಹುಡುಕಲಿಕ್ಕೆ ಬಂದೇವಿ."

ಈ ಜನ ಇಷ್ಟು ರವಸಿನಿಂದ ಯಾಕ ಏರಿಬಂದರು, ಇದರ ಕಾರಣ ಈಗ ತಿಳಿದಂತಾಯಿತು. ಅವರು ಸಿಟ್ಟಿಗೆ ಏಳೋದು ಸಹಜವಾದದ್ದು. ಜಗನ್ಯಾ ಇಂಥಾ ಭಾನಗಡಿ ಮಾಡ್ಯಾನ ಅಂತ ನಮ್ಮ ಕನಸಮನಸಿನ್ಯಾಗೂ ಇರಲಿಲ್ಲ. ಇದನ್ನು ಕೇಳಿ ರಾಮ. ಆನಂದ ಇಬ್ಬರೂ ಅಚ್ಚರಿಗೊಂಡರು. ಜಗನ್ಯಾಗ ಎರಡು ಬೈದು ಆನಂದ ಅಂದ,

"ಸೂಳೆಮಗನ್ನ ತಂದು, ಮನ್ಯಾಗ ತಿನ್ನಾಕ ದಿಕ್ಕಿಲ್ಲ ಮತ್ತು ಮ್ಯಾಲೆ ಇಂಥ ಲಫಂಗಗಿರಿ ರಾಂಡಬಾಜಿ ಮಾಡಲಿಕ್ಕೆ ಹೊರಟಾನ. ಅವ ಸಿಕ್ಕರ ಅವನ್ನ ಕೊಂದಬಿಡಿರಿ. ಪಾಟೀಲ, ಈ ವಾಡಿಯವರು ಯಾರೂ ನಿಮಂಗ ಅಡ್ಡ ಬರೋದಿಲ್ಲ."

ಆನಂದನ ಮಾತು ಕೇಳಿ ಈ ಜನ ಹಾದಿಗೆಬಂದು ಮಾತಾಡಹತ್ತಿದರು. ಹೆಣಮಗಳು ರಂಡಿಮುಂಡಿ ಇರಬಹುದು, ಆಕಿಗೆ ಯಾರೂ ಇರಲಿಕ್ಕಿಲ್ಲ ಆದರ ಇದು ನಮ್ಮ ಊರ ಮಾನದ ಪ್ರಶ್ನೆ ಅದ. ಒಬ್ಬ ರಾಮೋಶಿ ಬಂದು ನಮ್ಮೂರ ಹೆಣಮಗಳನ್ನು ಓಡಿಸಿಕೊಂಡ ಹೋಗತಾನ ಅಂದರ ನಮ್ಮೂರಿಗೆ ಕಲಂಕ ಹತ್ತಿದ್ಹಾಂಗ. ಹೀಗಿತ್ತು ಅವರ ಮಾತಿನ ಸಾರಾಂಶ. ಮತ್ತು ಅದು ಯೋಗ್ಯವೂ ಆಗಿತ್ತು. ಆನಂದ ಅಂದ,

"ಅದ ಈ ಊರಾಗ ಇದ್ದರ ನಿಮ್ಮ ಮುಂದ ತಂದ ನಿಂದರಸತಿದ್ದೆ. ನಮ್ಮ ಕೈಲೇನ ಅವನ ತಲಿಮ್ಯಾಲೆ ಕಲ್ಲಹಾಕತಿದ್ದೆವು. ಹಾಂss"

"ಎಲ್ಲಿ ಹೋಗತಾನ! ಇದ್ದಲ್ಲಿಂದ ಹುಡುಕಿ ಅವನ್ನ ಹಿಡಿತೇವು" ಆ ಜನ ಅಂದರು.

"ಬಡಪ್ರಾಣಿ ಅದೆಲ್ಲಿ ಹೋಗತದ! ನಿಮಂಗ್ಯಾಂಗ ಈಡಾದೀತು. ಅವನ ಸೊಕ್ಕು ನಿಮ್ಮ ಮುಂದ ಹ್ಯಾಂಗ ನಡದೀತು?"

ಏನು ಮಾತಾಡಬೇಕೆನ್ನುವದು ನನಗೆ ತೋಚುವಲ್ಲದು. ನಾಯಿ ಬೆನ್ನಹತ್ತಿದ್ಹ್ಯಾಂಗ ಈ ಜನ ಜಗನ್ಯಾನ ಬೆನ್ನಹತ್ತಿದ್ದರು. ಕೈಯಾಗ ಸಿಕ್ಕಿದ್ದರ ಅವನ ಕೊಂದಬಿಡತಿದ್ದರು. ಅದಕ್ಕೇನು ಹಿಂದಮುಂದ ನೋಡತಿದ್ದಿಲ್ಲ,

ಕೊನೆಗೆ ಆನಂದ ಅಂದ,

"ಈ ಮಾತು ನಿಮ್ಮ ಊರಿಗೆ ಕಲಂಕ ಇದ್ಹಾಂಗ, ನಮ್ಮ ರಾಮೋಶಿಯವರಿಗೂ ಐತಿ. ಖಂಡೋಬಾನ ಆಣಿ. ಇನ್ನ ಎಂಟ ದಿನದಾಗ ಜಗನ್ಯಾ ಮತ್ತ ಹೆಣಮಗಳನ ಹುಡುಕಿತಂದು ನಿಮಗ ಒಪ್ಪಸತೇನಿ."

ಡಾಂಗೀ ಜನ ವಿಚಾರದಾಗ ಬಿದ್ದರು.

"ಏನಂತಿರಿ ಮಾಸ್ತರ?" ಆನಂದ ಕೇಳಿದ.

"ಒಳ್ಳೇದು, ಜಗನ್ಯಾ ತಪ್ಪಮಾಡ್ಯಾನ. ಅವನ್ನ ಇವರಿಗೆ ಒಪ್ಪಿಸಲಿಕ್ಕೆ ಯಾವ ಅಡ್ಡಿ ಆತಂಕಗಳಿಲ್ಲ."

ಆಯಬೂ ಊರತುಂಬ ಅಡ್ಯಾಡಿ ಮರತುಂಬ ಶೇಂಗಾಕಾಳು ಮತ್ತು ಒಂದು ಹಿಡಿ ಬೆಲ್ಲ ತಂದ. ಅದನ್ನ ಡಾಂಗೀಜನರ ಮುಂದಿಟ್ಟ, ಅಷ್ಟರಾಗ ಒಂದು ಚರಗಿ ತುಂಬ ಚಹಾನೂ ಬಂತು. ಅವರು ಶೇಂಗಾಕಾಳು ತಿಂದು, ಚಹಾ ಕುಡಿದರು. ಅವರಿಗೆ ನಾವೆಲ್ಲ ಆಗ್ರಹ ಮಾಡಿದೆವು.

ಆನಂದನ ಮಾತನ್ನು ನಂಬಿ, ನನ್ನ ಜಾಮೀನ ತಗೊಂಡು ಅವರು ತಮ್ಮೂರಿಗೆ ಹೋದರು. ನಾವು ಅಗಸಿತನಕ ಕಳಿಸಲಿಕ್ಕೆ ಹೋಗಿದ್ದೆವು. ಅವರು ಕಾಣದಂತಾದ ಮೇಲೆ ನಾವು ತಿರುಗಿದೆವು. ನಾನು ಆನಂದಗ ಕೇಳಿದೆ,

"ಜಗನ್ಯಾ ಸಿಗದಿದ್ದರ ಹ್ಯಾಂಗ !"

ಆನಂದ ಖ್ಯಾಕರಿಸಿ ಉಗುಳಿ ಅಂದ,

"ರಾಮೋಶ್ಯಾರ ಗುಟ್ಟು ಹೇಳೊ ಹಾಂಗಿಲ್ಲ. ಅವ ಸುಡಗಾಡದಾಗ ಹೋಗಿರಲಿ. ಅವನ ಬೆನ್ನಹತ್ತಿ ಹಿಡಿವ ತರತೇನಿ, ಮಾಸ್ತರ !"

ನಸಕಿನ್ಯಾಗ ಎದ್ದು, ತನ್ನ ಸಂಗಡಿಲೆ ಡಾಂಗಿ ಹುಡುಗರನ್ನು ಕರಕೊಂಡು, ಕೊಡ್ಲಿ, ಕುಡಗೋಲು ಮತ್ತು ಲಾಠಿ ತಗೊಂಡು ಆನಂದ ಚಿಗರಿ ಬ್ಯಾಟಿಗೆ ಹೊರಟಾಂಗ, ಜಗನ್ಯಾನ್ನ ಹುಡುಕಲಿಕ್ಕೆ ಹೊರಟ. ವಾಡಿ ರಾಮೋಶಿಯರು ಯಲ್ಲಲ್ಲಿ ಹೋಗತಾರ ಅದೆಲ್ಲ ಅವಗ ಗೊತ್ತಿತ್ತು. ಜಗನ್ಯಾ ಊರಬಿಟ್ಟು ಎರಡ ದಿನ ಆಗಿದ್ದವು. ಇಷ್ಟರಾಗ ಅವ ಗಾಡಿಹತ್ತಿ ಮುಂಬಯಿಗೆ ಹೋಗೋದು ಸಾಧ್ಯವಿದ್ದಿಲ್ಲ. ತನ್ನ ಬೆನ್ನಹತ್ತಿ ಜನ ಬರಾವರ, ಸ್ಟೇಶನ ಸ್ಟೇಶನ ಹುಡುಕಾವರ ಅನ್ನೋದು ಜಗನ್ಯಾಗ ಗೊತ್ತಿತ್ತು. ಅದಕ್ಕ ಆದಷ್ಟು ದೂರ ಇದ್ದ ಆಪ್ತರ ಕಡೆ ಹೋಗಿರಬೇಕು. ಊರೂರಿಗೆ ಅವನ ಗುರತಿನ ಜನ ಇದ್ದ ಇತ್ತು. ಜಗನ್ಯಾನ ತಂಗಿನ್ನ ಹನ್ನೆರಡು ಹರದಾರಿ ಮ್ಯಾಲೆ ಕೊಟ್ಟಿತ್ತು. ಆ ಊರಕಡಿಗೆ ಆನಂದ ಹೊರಟು ಮಧ್ಯಾನ್ಹ ಹನ್ನೆರಡಕ್ಕ ಅವ ಜಗನ್ಯಾನ ಬೀಗನ ಮನಿಬಾಗಿಲದಾಗ ಹೋಗಿ ನಿಂತ.

ಇವರನ್ನು ನೋಡಿ ಜಗನ್ಯಾನ ತಂಗಿ ಗೊಂದಲದಾಗ ಬಿದ್ದಳು. ನೆರೆಹೊರೆ ಯವರಿಂದ ಹಿಟ್ಟು ತಂದು ರೊಟ್ಟಿ ಬಡದು ಇವರಿಗೆ ಊಟಕ್ಕ ಹಾಕಿದಳು. ಹೊಟ್ಟಿ ತುಂಬ ಊಟಮಾಡಿ ತೇಗಿ, ಯಲಿಅಡಕಿ ತಿಂದು ಆನಂದ ಜಗನ್ಯಾನ ಬೀಗನ ಕೇಳಿದ,

"ಜಗನ್ನಾಥ ಬಂದಿದ್ದನೇನು?"

"ಇಲ್ಲ, ಅವ ಇಲ್ಲಿ ಬಂದಿಲ್ಲ !"

ಈ ಉತ್ತರ ಆನಂದ ಅಪೇಕ್ಷಿಸಿದ್ದ. ಹೇಳುವಾಗ ಬೀಗನ ಮುಖದ ಮೇಲೆ ಆಗುವ ಬದಲನ್ನು ಅವನು ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದನು. ಅದರವ್ಯಾಲಿಂದ ಜಗನ್ಯಾ ಇಲ್ಲಿ ಬಂದ ಹೋಗ್ಯಾನ ಅನ್ನೋದು ತಿಳಕೊಂಡ. ಹೆಣಮಗಳನ್ನು ಓಡಿಸಿ ಕೊಂಡ ಬಂದದ್ದೂ ಬೀಗಗ ಗೊತ್ತಿರಬೇಕು ಅಂತನೂ ತಿಳಕೊಂಡ. "ನಿಮ್ಮ ಮುಂದ ಯಾಕ ಸುಳ್ಳ ಹೇಳಲಿ. ಜಗನ್ಯಾ ಒಂದು ಹೇಶಿಕೆಲಸ ಮಾಡ್ಯಾನ. ಹಾಂಗೀ ಊರಾಗಿನ ಒಂದು ದೊಡ್ಡ ಮನೆತನದ ಹೆಣಮಗಳನ್ನು ಓಡಿಸಿಕೊಂಡ ಹೋಗ್ಯಾನ. ಆ ಊರವರು ಒಂದು ನೂರುಮಂದಿ ನಮ್ಮೂರ ಮ್ಯಾಲೆ ಬರ್ಚಿ, ಕೊಡ್ಲಿ, ಕುಡಗೋಲು ಮತ್ತು ಲಾಠಿ ತಗೊಂಡು ದಾಳಿಮಾಡಲು ಬಂದರು. ಅವರಿಗೆ ಕೈಕಾಲು ಬಿದ್ದು ಹೇಳಕೊಂಡೀವಿ. ಜಗನ್ಯಾನ್ನ ಮತ್ತು ಆ ಹೆಣಮಗಳನ್ನು ಅವರಿಗೆ ಒಪ್ಪಿಸತೇವಿ ಅಂತ. ನಮ್ಮೂರಿಗೆ ತ್ರಾಸಕೊಡಬ್ಯಾಡರಿ ಅಂತ ಅಂಗಲಾಚಿ ಬೇಡಿಕೊಂಡಿವಿ. ಅವರು ಈಗ ತಿರುಗಿ ಹೋಗ್ಯಾರ. ಇಲ್ಲದ್ದರ ನಮ್ಮೂರಾಗ ನಾಲ್ಕಾರು ಖೂನ ಬೀಳತಿದ್ದವು." ಆನಂದ ಜಗನ್ಯಾನ ಬೀಗಗ ಹೇಳಿದ.

ಈ ಮಾತಿನ ತಿರುಳು ಅವನಿಗೆ ತಿಳಿಯದೆ ಇರಲಿಲ್ಲ. ಅವ ವಿಚಾರದಾಗ ಬಿದ್ದಾಂಗ ಕಂಡಿತು. ಒಳಗ ಜಗನ್ಯಾನ ತಂಗಿ ಎದಿ ಡವಡವ ಅನ್ನತಿತ್ತು. ಆದರ ಜಗನ್ಯಾ ತನ್ನಲ್ಲಿ ಬುದಿದ್ದ ಅನ್ನೊದು ಒಪ್ಪದನ ಬೀಗ ಅಂದ,

"ಜಗನ್ನಾಥ ತಪ್ಪುಮಾಡ್ಯಾನ. ತನಗ ಮೀರಿದ ಮಾತಿಗೆ ಕೈಹಾಕ್ಯಾನ. ಹೆಂಗಸನ್ನು ಓಡಿಸಲಿಕ್ಕೆ ಅಡ್ಡಿ ಇಲ್ಲ, ಆದರ ತಮ್ಮ ಜಾತಿ ಆಕಿನ್ನ ಓಡಿಸಬೇಕಾಗಿತ್ತು. ಏನ ಇದ್ದರೂ ಈಗ ಅವನ್ನ ಹಿಡಿದ ಏನು ಆಗೋದದ? ಹೆಣ್ಣಿನ ಮಾನ ಹೋದದ್ದು ತಿರುಗಿ ಬರತದೇನು? ಅವರು ಆಕಿನ್ನ ಏನ ತಿರುಗಿ ಜಾತ್ಯಾಗ ಕರಕೊಳ್ಳುದಿಲ್ಲ. ಜಗನ್ನಾಥಗ ತಗೊಂಡು ಆದರ ಅವರೇನು ಮಾಡಾವರು? ಹೊಡೆಯುವರು ಇಲ್ಲದಿದ್ದರ ಕೊಲ್ಲು ವರು. ಇಷ್ಟೆಲ್ಲ ಆದರೂ ಹೋದ ಮಾನ ತಿರುಗಿ ಬರತದೇನು?"

"ಮಾನ ಬರುದಿಲ್ಲ ಇದು ನಿಜ" ಆನಂದ ಅಂದ.

"ಹಾಂಗಾರ ನೀವ್ಯಾಕ ಇಷ್ಟು ಕಷ್ಟಪಡತಾ ಇದ್ದೀರಿ. ಅವರಿಬ್ಬರೂ ಸುಖದಿಂದ ಚೈನಿಮಾಡುವಲ್ಲರು. 'ಮಿಯ್ಯಾ ಬಿಬ್ಬಿ ರಾಜಿ ತೋ ಕ್ಯಾಕರೇ ಕಾಜಿ' ಗಂಡು ಹೆಣ್ಣು ರಾಜಿ ಇದ್ದರ ಯಾವ ಏನ ಮಾಡಾವ?"

ಅವನು ಹೇಳಿದ ಮಾತು ಖರೇ ಇದ್ದವು. ಆದರ ಒಂದು ಮಾತು ಮರೆತಿದ್ದರು. ಜಗನ್ಯಾ ಚೈನಿಲೆ ಇರಬಹುದಾಗಿತ್ತು. ಆದರ ಹಾಂಗೀ ಜನ ಅವನ ಮನಿ ಮಂದೀನ್ನ ಹೊಡೆದು, ಗುಡಿಸಲ ಸುಟ್ಟುಬಿಡತಿದ್ದರು. ಇಡೀ ರಾಮೋಶಿ ಓಣೀನ ಸುಟ್ಟುಬಿಡ ತಿದ್ದರು. ಇಡೀ ಊರಿಗೆ ಸಂಕಟ. ಸಣ್ಣ ಊರು ಅದನ್ನೆಲ್ಲ ತಡೆಯುವದು ಹೇಗೆ?

ಆನಂದ ಇದನ್ನೆಲ್ಲ ಅವರಿಗೆ ತಿಳಿಸಿ ಹೇಳಿದ. ಆದರ ಅವ ಒಪ್ಪಲಿಲ್ಲ. ಎಷ್ಟು

ಸಾರೆ ಕೇಳಿಕೊಂಡರೂ ಹೇಳಲಿಲ್ಲ. ಅವನು ಆನಂದನತ್ತ ಗಮನ ಕೊಡಲಿಲ್ಲ. ಇದನ್ನೆಲ್ಲ ನೋಡಿ, ಆನಂದ ಎದ್ದು ಅಂದನು,

"ಹಾಂಗಾರ ನಾವೇನು ಮಾಡಬೇಕು ಅದನ್ನ ಮಾಡತೇವಿ ರಾಮರಾಮ" ಇಷ್ಟಂದು ಹೊರಡಬೇಕೆಂದು ಮಾಡಿದ. ಅಷ್ಟರಾಗ ಜಗನ್ಯಾನ ತಂಗಿ ಅತಕೊತ ಹೊರಗ ಬಂದು ಅಂದಳು,

"ಆನಂದ, ಜಗು ಬಾದಿದ್ದ."

ಗಂಡ ಕೆಂಪುಕಣ್ಣು ಮಾಡಿ ಅವಳತ್ತ ನೋಡಿದ, ಆದರೂ ಆಕೆ ಸುಮ್ಮನಿರದೆ ಅಂದಳು,

"ಟೇಶನಿಗೆ ಹೋಗ್ಯಾನ. ಆ ಹೆಣಮಂಗಳನ್ನ ಕರಕೊಂಡು ಸಾಂಗಲಿಗೆ ಹೋಗ ಬೇಕು ಅಂತಿದ್ದ. ಏನ ಆದರೂ ಅವನ ಜೀವಕ್ಕ ಅಪಾಯ ಆಗದಾಂಗ ನೋಡಿಕೊ, ನನ್ನಾಣಿ!"

ಆನಂದ ಅಂದ,

ಆಣಿ ಬಿಟ್ಟಿತು. ನಮಗೂ ದೇವರು ಒಟು ಬುದ್ಧಿಕೊಟ್ಟಾನ! ನಾವ್ಯಾಕ್ಯಾಗ ಅವನ್ನ ಕೊಲಗೊಟ್ಟೇವು. ಇಲ್ಲಿಂದ ಯಾವಾಗ ಹೋದ?"

"ನಸುಕು ಹರಿಯಾದರಾಗ ಹೋಗ್ಯಾನ. ಇನ್ನೂ ಗಾಡ್ಯಾಗ ಕೂತಿರಲಿಕ್ಕಿಲ್ಲ."

ಮಿರಜಿ ಗಾಡಿ ಮಧ್ಯಾಹ್ನ ಮೂರಕ್ಕ ಇತ್ತು. ಆನಂದ ಜಗ್ಯಾನ ತಂಗಿಗೆ ಧೈರ್ಯ ಹೇಳಿ, ಗಡಿಬಿಡಿಯಿಂದ ಅವರಿಂದ ಪಾರಾದ. ಗಂಡಗಚ್ಚಿ ಹಾಕಿ, ಕೈಯಾಗ ಚಪ್ಪಲ (ಮೆಟ್ಟು) ಹಿಡಿದು ಟೇಶನ ದಾರಿ ಹಿಡಿದ. ಬಿಸಲಾಗ ಕಾವ ಹಾದ್ಯಾಗ ಈ ಜಿಗಟ, ಗಬ್ಬುಳ್ಳ ರಾಮೋಶಿಯರು ಓಡಹತ್ತಿದರು. ನೋಡ ನೋಡುವದರಲ್ಲಿ ಮೂರು ಹರದಾರಿ ನೆಲ ದಾಟಿದ್ದರು. ದೂರ ಹಾದಿಮ್ಯಾಲಿನ ಒಂದು ಆಲದಮರದ ಬುಡಕ ಒಬ್ಬ ಹೆಣಮಗಳು ಮತ್ತು ಒಬ್ಬ ಗಂಡಮಗ ಕೂತದ್ದು ಅವರಿಗೆ ಕಂಡಿತು.

ಜಗನ್ಯಾ ಜಿಗಟ ಇದ್ದ ಮತ್ತು ಚುರುಕೂ ಇದ್ದ. ಆದರ ಅವನ ಜೋಡಿ ಹೆಣಮಂಗಳು ಚೆಲುವಿ ಇದ್ದರೂ ಲಠ್ಠ ಇದ್ದಳು. ಮೊದಲ ಹೆಣ್ಣು, ಅದರಾಗ ಮೈಬಿಟ್ಟಾವಳು. ಎಷ್ಟ ಅಂಜಿದ್ದರೂ ಇಬ್ಬರಿಗೂ ಮುಂದಹೋಗೊದು ಸಾಧ್ಯವಿದ್ದಿಲ್ಲ. ಹಾಂಗ ಹಾದ್ಯಾಗ ಕೂತಕೊತ, ಎದ್ದಕೊತ ಹೊರಟಿದ್ದರು. ನಡನಡುವೆ ನೆರಳಾಗ ವಿಶ್ರಾಂತಿ ಪಡೆಯುತ್ತಿದ್ದರು.

ಆನಂದ ಸ್ವಲ್ಪ ನಿಂತ. ಹಣೆಗೆ ಕೈಹಚ್ಚಿ ನೀಟಾಗಿ ನೋಡಿದ, ತನ್ನ ಸಂಗಡಿಲೆ ಬಂದ ಹುಡುಗರಿಗೆ ಅಂದ,

"ಅಲ್ಲಿ ಕೂತವ ಜಗನ್ಯಾ. ಆ ಕೆಂಪು ಪಟಕ ಅವಂದ. ಆದರ ಈಗೇನು ಮಾಡಬೇಕು. ಅವ ಓಡಿಹೋಗಾವ."

ಹುಡುಗರಂದರು,

"ಓಡ್ಯಾರ ಹೋಗಲಿ. ಮೊಲಕೆಡವಿದ್ಹಾಂಗ ಕೆಡವತಪಿ ಅವನ್ನ."

"ಕೆಡವತಿರಿ?"

"ಹೌದು. ಅವ ಓಡಿದರೂ ಆ ಹೆಣಮಗಳು ಎಲ್ಲಿ ಹೋಗತಾಳ?"

"ಆಕಿನ್ನ ತಗೊಂಡ ಏನ ಮಾಡೋದು? ನಮಗ ಬೇಕು ಜಗನ್ಯಾ!"

"ಅವನಾರ ಎಲ್ಲಿ ಹೋಗತಾನ? ತಳಗ ನೋಡಕೊತ ಮುಂದನಡಿ."

ನಾಕುದಿಕ್ಕಿಗೆ ನಾಕು ಹುಡುಗರು ಹೊರಟವು. ಹಾಂಗ ಮುಂದಹೋಗಿ ಜಗನ್ಯಾನ್ನ ಆ ಹೆಣಮಗಳನ್ನ ಸುತ್ತುವರೆದರು. ಸಾವಕಾಶ ಸದ್ದಿಲ್ಲದ ಜಾಗರೂಕತೆಯಿಂದ ಜಗನ್ಯಾ ಇದ್ದಕಡೆ ನಡೆದರು.

ಜಗನ್ಯಾ ನೆತ್ತಿಮ್ಯಾಲೆ ಬಂದ ಸೂರ್ಯನ ನೋಡಕೊತ ಅಂದ,

"ಲಗು ಏಳs ಗಾಡೀ ತಪ್ಪೀತು."

ನಡದು ನಡದು ನುಗ್ಗಾದ ಆ ಹೆಣಮಗಳು, ತನ್ನ ಒಣಗಿದ ನಾಲಿಗೆಯನ್ನು ಒಡೆದ ತುಟಿಮ್ಯಾಲೆ ಆಡಿಸುತ್ತ ಅಂದಳು,

"ಇನ್ನೊಂದು ಸ್ವಲ್ಪ ನಿಲ್ಲು. ಇಲ್ಲದರ ನಾ ಸಾಯತೇನಿ."

ಅಷ್ಟರಾಗ ಜಗನ್ಯಾ ಬೆದರಿ ನಿಂತ. ಅವ ಸುತ್ತಲ ನೋಡಿದ. ಕೆಲವು ಅಂತರದ ಮ್ಯಾಲೆ ನಿಂತ ಆನಂದನ್ನ ಕಂಡ. ಹೆಣಮಗಳ ಕೈಹಿಡಿದು ಜಗ್ಗಿ ಅಂದ,

"ಏಳು, ಓಡು ನಮ್ಮನ್ನ ಹಿಡ್ಯಾಕ ಜನ ಬಂದಾರ."

ಇಬ್ಬರೂ ಗಟ್ಟಿಮನಸು ಮಾಡಿ ಓಡಾಕಹತ್ತಿದರು. ಆನಂದ ಒದರಿದ,

"ಏ ಜಗನ್ಯಾ ಓಡಬ್ಯಾಡ, ನಿಂದರು."

ಜಗನ್ಯಾ, ಆ ಹೆಣಮಗಳು ಇಬ್ಬರೂ ಮೈಮರೆತಿದ್ದರು. ಸರಳ ಹಾದಿ ಬಿಟ್ಟು ಹೊಲದಾಗ ಅಡ್ಡಬಿದ್ದ ಓಡಾಕಹತ್ತಿದರು, ಅವಳ ಸೆರಗು ಮತ್ತು ಜಗನ್ಯಾನ ಪಟಕಾದ ಚುಂಗು ಗಾಳ್ಯಾಗ ಪಟಾ ಹಾರಿದ್ಹಾಂಗ ಹಾರತಿದ್ದವು. ಕಲ್ಲು, ಮಣ್ಣು, ತಗ್ಗು, ದಿನ್ನಿಗಳನ್ನೂ ಲೆಕ್ಕಿಸದೆ ಅವರು ಓಡಓಡತಿದ್ದರು. ಆನಂದ ಅವರ ಬೆನ್ನಹತ್ತಿದ್ದ.

ಓಡತಾ ಓಡತಾ ದಣಿದು ಆ ಹೆಣಮಗಳು ಕೆಳಗೆ ಬಿದ್ದಳು. ಯರಿ ಹೊಲದಾಗ ಬಿದ್ದಳು. ಜಗನ್ಯಾ ತಿರುಗಿ ಬಂದು ಆಕಿನ್ನ ಎಬಿಸಲಿಕ್ಕೆ ಹತ್ತಿದ. ಅಷ್ಟರಾಗ ಹುಡುಗರು ಸಮೀಪ ಬಂದದ್ದು ಕಂಡ. ಬಿದ್ದ ಹೆಣಚಿಗರಿ ಬಿಟ್ಟು, ಜೀವ ಉಳಿಸಲು ಓಡುವ ಗಂಡಚಿಗರಿ ಹಾಂಗ, ಜಗನ್ಯಾ ಆಕಿನ್ನ ಅಲ್ಲೆ ಬಿಟ್ಟು ಓಡಲಿಕ್ಕೆ ಹತ್ತಿದ.

ಹೆಣಮಗಳ ಹತ್ತರ ಬಂದು ಹುಡುಗರು ನಿಂತವು. ಆನಂದ ಜಗನ್ಯಾನ ಬೆನ್ನಹತ್ತಿದ. ಅವರಿಬ್ಬರ ನಡುವೆ ಪಂದ್ಯಾಟ ನಡೀತು. ತರುಣ ಜಗನ್ಯಾ ಆನಂದಗ ಬಗ್ಗಲಿಲ್ಲ. ಆದರ ತಮ್ಮ ನಡುವಿನ ಅಂತರ ಕಡಿಮೆ ಆದದ್ದು ನೋಡಿ, ಆನಂದ

ಗುರಿ ಇಟ್ಟು ಜಗನ್ಯಾನ ಮೈಮ್ಯಾಲೆ ಕೊಡ್ಲಿ ಜೋರಿಲೆ ಒಗೆದ. ಓಡೋ ಚಿಗರಿ ಗಾಯ ಆಗಿ ಬಿದ್ಹಾಂಗ, ಜಗನ್ಯಾ ನೆಲಕ್ಕ ಬಿದ್ದ. ಓಡಿ ದಣಿದ ಜಗನ್ಯಾ ಪೆಟ್ಟ ಹತ್ತಿ ದನದ್ಹಾಂಗ ಒದರಿದ.

ಚಕಡ್ಯಾಗ ಜಗನ್ಯಾನ ಹಾಕಿ ಆನಂದ ವಾಂಗೀಗೆ ತಂದ. ರಕ್ತ ಸೋರಿ ಜಗನ್ಯಾ ಬೆಳ್ಳಗಾಗಿದ್ದ. ಆ ಹೆಣಮಗಳು ಸತ್ತ್ಹಾಂಗ ಆಗಿದ್ದಳು. ಆನಂದ ಅಂದ,

"ನಿಮ್ಮ ಹೆಣಮಂಗಳು ಜಗನ್ಯಾ ಇಬ್ಬರನೂ ತಗೊಳ್ಳರಿ. ನಿಮಗ ಒಪ್ಪಿಸೇನಿ. ನಮ್ಮ ಜಗನ್ಯಾಗ ನಾನ ನನ್ನ ಕೈಲೆ ಹೊಡದೇನಿ. ಉಳಿದ ಜೀವ ಬೇಕಾರ ನೀವು ತಗೊಳ್ಳರಿ ಇಲ್ಲದರ ಬಿಡರಿ!"

ಜಗನ್ಯಾ ಮೂರ್ಛೆಬಿದ್ದಿದ್ದ. ಅವನ ಅಂಗಿ ಧೋತರ ರಕ್ತ ಮುಳುಗಿದ್ದವು. ಆ ಹೆಣಮಂಗಳಿಗೆ ಲಾರಿಲೆ ಹೊಡಕೊತ ಆ ಜನ ಹೋದರು. "ಜಗನ್ಯಾನ್ನ ನಿಮ್ಮೂರಿಗ ಒಯ್ಯರಿ" ಅಂತ ಹೇಳಿದರು.

ಆನಂದ ಅವನ್ನ ಕರಕೊಂಡು ವಾಡಿಗೆ ಬಂದ. ಊರಜನ ತೊಪ್ಪಲ ಕಟ್ಟಿ ಅವನ ಗಾಯ ಮಾಯಿಸಿದರು. ವಾಂಗೀ ಜನ ಆ ಚೆಲುವ ಹೆಣಮಗಳ ಮೂಗಕತ್ತರಿಸಿ ಹೊರಗ ಹಾಕಿದರು. ಮೂಗಿಗೆ ಪಟ್ಟಿ ಕಟಗೊಂಡು ಆಕಿ ಜಗನ್ಯಾನ ಮನಿಗೆ ಬಂದು ಅತ್ತಅತ್ತಳು. ರಾಮೋಶಿಯವರು ಯಾರೂ ತಮ್ಮ ಓಣ್ಯಾಗ ಇಟಕೊಳ್ಳಲಿಕ್ಕ ಒಪ್ಪಲಿಲ್ಲ. ಒಂದು ದಿನ ಊರ ಬಿಟ್ಟು ಹೋದಾಕಿ, ತಿರುಗಿ ಯಾರಿಗೂ ಕಾಣಲಿಲ್ಲ.

ಜೂನ ತಿಂಗಳು ಬಂತು. ಮೃಗ ನಕ್ಷತ್ರ ಬಂತು. ಮೃಗದ ಮಳಿ ಈ ಸಿಟ್ಟಿಗೆ ಎಂದೂ ನೆಟ್ಟಗೆ ಬೀಳೊದಿಲ್ಲ. ಈ ವರ್ಷನೂ ವಾಡಿ ವಿಭಾಗದಲ್ಲಿ ಬೀಳಲಿಲ್ಲ, ಪ್ರತಿವರ್ಷ ಹಶಿಮಳಿಯಾದರೂ ಆಗತಿತ್ತು. ಈಸಲ ಅದೂ ಬೀಳಲಿಲ್ಲ. ಇಡೀ ನಕ್ಷತ್ರ ಒಣಾದೇ ಹೋಯಿತು. ಆದ್ರಿ ಮಳಿ ಹಾದಿ ಜನ ಕಾಯುಹತ್ತಿದರು.

ನೋಡಿದಲ್ಲೆಲ್ಲ ಬಟಾಬೈಲು. ಅಡವಿಗೆ ಹೋದ ಕುರಿ ಅರಹೊಟ್ಟಿಲೆ ತಿರುಗಿ ಬರತಿದ್ದವು. ಸುಗ್ಗ್ಯಾಗ ಬಿದ್ದ ಒ ಯಲಿ, ಮೇವಿನ ಚೂರು ಇಂಥಾದ ತಿಂದು ಕುರಿ ಬದಕಿದ್ದವು. ಮಳಿ ಬಂದು ಹ ರು ಹುಲ್ಲಿನ ಹಾದಿ ಕಾಯುಕೊತ ಕೂತಿದ್ದರು.

ಇಂಥಾದರೊಳಗ ನಸುಕಿನಲ್ಲಿ ಏಳೋ ಮುಂದ ಕಾರಭಾರಿಗೆ ಒಂದು ಕೆಟ್ಟ ಕನಸು ಬಿದ್ದಿತು: ಟೊಂಕಕ್ಕೆ ಬೇವಿನ ತೊಪ್ಪಲ ಕಟ್ಟಿದ, ಕೂದಲ ಬಿಚ್ಚಿದ, ಹಣೆತುಂಬ ಕುಂಕುಮ ಹಚ್ಚಿದ ಒಬ್ಬ ಹೆಣಮಗಳು ಕನಸಿನ್ಯಾಗ ಬಂದು ಅಂದಳು,

"ನಿನಗ ಕರಕೊಂಡ ಹೋಗಾಕ್ಕ ಬಂದೇನಿ, ತಯಾರಾಗು."

ಮುದಕ ಅಂಜಿ ಕೇಳಿದ,

"ಯಲ್ಲಿ?"

"ದೇವರ ಮನಿಗೆ, ನಾಳೇ ಹೋಗೊದು ತಯಾರಿ ಮಾಡು."

ಕಾರಭಾರಿ ಬೆದರಿ ಎದ್ದ, ಮೈ ಪೂರಾ ಬೆವತಿತ್ತು. ಹಾಂಗ ಹಾಸಿಗ್ಯಾಗ ಕೂತ.

ನಾ ಎಚ್ಚರಾಗೋದರೊಳಗ ನನ್ನ ಮನಿಗೆ ಬಂದ. ಹಾಸಿಗೆ ತುದಿಗೆ ಕೂತು, ಪಾದಮುಟ್ಟಿ ನಮಸ್ಕಾರ ಮಾಡಿದ. ನನಗ ಅರ್ಥನ ಆಗಲಿಲ್ಲ.

ಕಾರಭಾರಿ ಅಂದ,

"ಕೊನೆಯ ರಾಮರಾಮ, ನಾ ಇನ್ನ ಹೊರಟೆ!"

ಈ ಮುದಕ ಊರಬಿಟ್ಟದ್ದ ನಾ ನೋಡಿದ್ದಿಲ್ಲ.

"ಯಲ್ಲಿ ಹೊರಟಿರಿ? ಯಾವಾಗ ಬರತೀರಿ?" ಅಂತ ಕೇಳಿದೆ.

ಮುದಕ ಅಂದ,

"ನಾ ಅಂತೂ ಹೊರಟೆ. ಇನ್ನ ತಿರುಗಿ ಬರೊಹಾಂಗ ಇಲ್ಲ!"

"ಅಂದರ?"

"ನಾಳಿ ಅನ್ನೊವದರೊಳಗ ನಾ ಸಾಯಾವ!"

ಅದೇನು ನಗಚ್ಯಾಟಗಿ ಮಾತಿದ್ದಿಲ್ಲ. ಮುದಕ ಗಂಭೀರವಾಗಿ ಹೇಳತಿದ್ದ. ನಾನು ಚ್ಯಾಷ್ಟಿ ಮಾಡಿದೆ, ಆಗ ಅವ ತನಗ ಬಿದ್ದ ಕನಸ ಹೇಳಿದಾ.

ನಾ ಅಂದೆ. "ಕಾರಭಾರಿ, ನೀವೇನು ಹುಚ್ಚರೇನು? ಕನಸ ಯಂದಾರ ನಿಜ ವಾಗತಾವೇನು?"

"ಅಯ್ಯೊ ಮಗನ, ಆಗತಾವ. ನನ್ನವು ಅನಕಾ ಆಗ್ಯಾವ."

"ಏನಾರ ಹೇಳತಿರಿ ಆತು. ಹುಡುಗರ್‍ಹಾಂಗ ಏನೋ ತಲ್ಯಾಗ ಹಾಕ್ಕೊಂಡಿರಿ. ನಿಮ್ಮಂಥ ತಿಳುವಳಿಕೆ ಇದ್ದವರ ಹೀಂಗ ಮಾಡಿದರ ಹ್ಯಾಂಗ?"

ಮುದಕ ಕಡೀ ಮಾತ ನಡೆಸಿದ್ದ. ನಾನು ಅವನ ಮಾತಿನತ್ತ ಗಮನ ಕೊಡಲಿಲ್ಲ. ಹೋಗೊ ಮುಂದ ಹೇಳಿದ,

"ನಂದೇನ ಅದ ಅದನ್ನೆಲ್ಲ ಅಂಜೀಗೆ ಕೊಡತೇನಿ. ಆಕಿನ್ನ ಶೇಕೂನ ಕಡೆ ಒಪ್ಪಿಸತೇನಿ. ಅವ ಆಕಿನ್ನ ನೋಡಿಕೊತಾನ, ಮದುವಿ ಮಾಡತಾನ, ನಿಮ್ಮದೂ ಸ್ವಲ್ಪ ಲಕ್ಷ ಇರಲಿ......" ಹೀಂಗಂದವನ ಎದ್ದು ಹೋಗೇಬಿಟ್ಟ.

ದಿನವಿಡೀ ಕಾರಭಾರಿ ಊರತುಂಬ ಅಡ್ಯಾಡಿ ತನ್ನ ಕನಸನ್ನು ಹೇಳಿದ. ಇಂಥಾ ಹುಚ್ಚತನ ನಂಬಾವರ್‍ಯಾರು? ಕೆಲವರು ಚ್ಯಾಷ್ಟಿ ಮಾಡಿದರು. ಕೆಲವರು ನಕ್ಕರು. ಯಾರೂ ಅವನ ಮಾತಿನತ್ತ ಗಮನಕೊಡಲಿಲ್ಲ. ಶೇಕೂ ನೋಡಿದರ ಮಬ್ಬ, ಆದರ ಅವನೂ ಅಂದ,

"ನಾನಾ, ಸಾಯಂಲಿಕ್ಕೆ ನಿನಗೇನಾಗ್ಯೆತಿ ಧಾಡಿ? ಇನ್ನೂ ಐದು ವರಸಾರ ಬೇಕು. ಹೋಗ ಘನಿಗೆ."

ಯಾರು ನಗಲಿ, ಚ್ಯಾಷ್ಟಿ ಮಾಡಲಿ, ಏನ ಅನ್ನಲಿ, ಕಾರಭಾರಿ ಇಡೀ ದಿನ, ತನಗೆ ಬೇಕಾಗವರಿಗೆಲ್ಲ ಭೆಟ್ಟಿಯಾಗತಿದ್ದ. ಸಂಜೆ ಆತು. ಕುರಿ ತಿರುಗಿ ಬಂದವು. ಯಾರೋ ಬಂದು, "ಕಾರಭಾರಿಗೆ ವಾಂತಿ ಮತ್ತು ಜುಲಾಬ ಆಗ್ಲಿಕ್ಕ ಹತ್ಯಾವ" ಅಂತ ಹೇಳಿದರು.

ನಾನು ಓಡತಾನೆ ಅವನ ಮನಿಗೆ ಹೋದೆ. ಮುದಕ ನುಗ್ಗಾಗಿದ್ದ. ಕಣ್ಣು ಒಳಗೆ ಹೋಗಿದ್ದವು, ಮಾರಿ ಒಣಗಿತ್ತು, ಮಾತ ಬರತಿದ್ದಿಲ್ಲ. ನಾ ಹೋದಾಗನ ಬಾಯಾಗನ ಅಂದ,

"ಸುಳ್ಳ ಅಲ್ಲ, ನನಗ ಕರವಾರ."

ನಾನು ಬೆದರಿಸಿದೆ ಮತ್ತು ಅಂದೆ,

"ಏನಾಗುದಿಲ್ಲ, ನಾಳೆ ಬೆಳಗಾಗೋದರೊಳಗ ಆರಾಮು ಆಗತದ."

ಮನ್ಯಾಗಿನ ಉಪಾಯಗಳೆಲ್ಲ ನಡೆದವು. ಅದನ್ನ ಕುಡಿಸು, ಇದನ್ನ ನೆಕ್ಕಿಸು ಹೀಂಗ ರಾತ್ರಿ ಹನ್ನೆರಡರ ತನಕ ನಡೀತು. ಬ್ಯಾನಿ ಕಡಿಮೆಯಾಗಲಿಲ್ಲ. ಎಲ್ಲಾರು ಧೈರ್ಯ ಕಳಕೊಂಡೆವು. ಅಂಜೀ, ಶೇಕು ಅಳಲಿಕ್ಕೆ ಹತ್ತಿದರು. ಮುದಕನ ಆಪ್ತರೆಲ್ಲ ಕಣ್ಣೀರು ಸುರಿಸಹತ್ತಿದರು. ಅದನ್ನು ಕೇಳಿ, ನೋಡಿ ಕಾರಭಾರಿ ಅಂದ,

"ಯಾಕ ಅಳತೀರಿ? ನಂದೇನು ಉಳದದ? ಇಂಥಾ ದೊಡ್ಡ ಪಂಥ ಸರಕಾರ, ಅವನೂ, 'ಏನು ಪಾಟೀಲ' ಅಂದು ನನ್ನ ಬೆನ್ನ ಚಪ್ಪರಸಿದ, ಇನ್ನೇನು ಉಳದದ ನಂದು?"

ಸೂರ್ಯ ಹುಟ್ಟೋದಕ್ಕ ಎಲ್ಲ ಮುಗಿದಿತ್ತು! ಕಾರಭಾರಿ ಪ್ರಾಣಬಿಟ್ಟಿದ್ದ!

ಒಬ್ಬ ಮುದಕ ಹೋದ. ವಾಡ್ಯಾಗ ಭಣಭಣ ಅನಿಸಿತು. ನನ್ನ ಬೆನ್ನ ಕಟ್ಟುವ ಇಲ್ಲದ್ಹಾಂಗ ಆದೆ. ಆ ಸಾಲಿ, ಆ ಗರಡಿಮನಿ ಎಲ್ಲಾನೂ ಕಳೆಗುಂದಿದ್ಹಾಂಗ ಆದವು. ಮನಿಗೆ ಹೋದರ ಎಂಟೆಂಟು ದಿನ ಸಾಲಿಗೆ ಬರತಿದ್ದಿಲ್ಲ.

## ೧೮

ಶೇಕೂನ ಎತ್ತರಾದ ಹೆಂಡತಿ ನನ್ನಕಡೆ ಎಂದೂ ಬಂದಿರಲಿಲ್ಲ. ಮಧ್ಯಾಹ್ನವಾಗಿತ್ತು. ಅದೆ ಊಟಮಾಡಿ ನಾನು ಓದತಾ ಕೂತಿದ್ದೆ. ಅಷ್ಟರಾಗ ಶೇಕೂನ ಹೆಂಡತಿ ಬಂದು ಬಾಗಿಲದಾಗ ಸಂಕೋಚವೆನಿಸಿ ನಿಂತಿದ್ದಳು, ನಾನು ಸಾವರಿಸಿ ಕೂತೆ.

ಅವಳಂದಳು,

"ಏನ ನಡದೈತಿ, ಮಾಸ್ತರ?"

"ಏನಿಲ್ಲ, ಇದ ಊಟ ಮುಗಿಸಿ ಓದತಾ ಕೂತೇತಿ, ಕೂಡ್ರಿ."

ನನ್ನ ಮಾತಿನಿಂದ ಕೊಂಚ ಸಂಕೋಚ ಕಡಿಮೆಯೆನಿಸಿ, ಸೆರಗಿನ್ಯಾಗ ಕಟಕೊಂಡು ಬಂದ ಕಡಲೆಕಾಯಿ (ಶೆಂಗಾಕಾಳು) ತಳಗ ಸುರವಿ ಅಂದಳು,

"ಶೆಂಗಾ ತಂದೇನಿ. ನಿಮಗ ಕೊಡಾಕ ನಮ್ಮಕಡೆ ವಂತ್ತೇನೈತಿ?"

"ಮಾಸ್ತರಗ ಅದಾರ ಕೊಡಬೇಕು ಅಂತ ಎಲ್ಲೈತಿ? ಕೂಡ್ರಿ."

ನಾ ಹೇಳಿದರೂ ಶೇಕೂನ ಹೆಂಡತಿ ಕೂಡಲಿಲ್ಲ. ಆಕಿಗೆ ಏನೋ ಹೇಳೊದ ಅದ, ಅದಕ್ಕ ಬಂದಾಳ ಅನ್ನೊದು ನಾ ತಿಳಕೊಂಡೆ. ಕಾರಭಾರಿ ಸಾಯೋವುಂದ ಅಂಜೀನ್ನ ಶೇಕೂಗ ಒಪ್ಪಿಸಿದ್ದ. 'ಅಂಜೀಗೆ ಸರಳ ಹಚ್ಚಿಕೊಡಂ' ಅಂತ ಅವಗ ಹೇಳಿದ್ದ. ಮುದಕ ಸತ್ತಾಗಿಂದ ಅಂಜೀ ಶೇಕೂನಲ್ಲೆ ಇರತಿದ್ದಳು. ಅದ ಇನ್ನೂ ಮೂವತ್ತೈದು ದಾಟದ ಶೇಕೂ ಅಂಜೀ ಬೆನ್ನಹತ್ತಿದ್ದ. ಇದೆಲ್ಲ ನನ್ನ ಕಿವಿ ಮುಟ್ಟಿತ್ತು. ಆದರ ನಾ ಅದನ್ನ ನಂಬಿರಲಿಲ್ಲ. ಯಾರಾರ ಈ ಸುಳ್ಳು ಸುದ್ದಿ ಹಂಟ್ಟಿಶ್ಯಾರ ಅಂತ ಅನಿಸಿತ್ತು. ಈಕಿ ಅದನ್ನ ಹೇಳಲಿಕ್ಕೆ ಬಂದಿರಬೇಕೇನು ಎಂಬ ವಿಚಾರ ಮಿಂಚಿಹೋತು. ಆದರ ಮಂದಿಮುಂದ ಇಂಥಾ ಮಾತ ಯಾರ ಹೇಳತಾರ?

ಶೇಕೂನ ಹೆಂಡತಿ ನಿಲ್ಲುವಲ್ಲಳೂ, ಕೂಡಲೂವಲ್ಲಳು. ಮಾತೂ ಆಡುವಲ್ಲಳು. ನನಗ ಎತ್ತೆತ್ತರ ಅನಿಸಲಿಕ್ಕೆ ಹತ್ತಿತು. ನಾನಾಗಿ ಕೇಳಬೇಕಂದರ, ಏನು ಕೇಳಬೇಕು ಅದ ಹೊಳೆಯುವಲ್ಲದು. ಕಡಿಗೆ ಏನಾರ ಮಾತಾಡಬೇಕಂತ ನಾನ ಅಂದೆ,

"ಏನಂತಾವ ಹೊಲಮನಿ?"

ಆಗ ಶೇಕೂನ ಹೆಂಡತಿ ಹೊತ್ಸಲದಾಗ ತುಂದಿಗುಂಡಿ ಮ್ಯಾಲೆ ಕೂತು ಗಲ್ಲಕ್ಕ ಕೈಹಚ್ಚಿ ಅಂದಳು,

"ನನ್ನ ಗಂಡಗ ಏನುಮಾಡಬೇಕ, ಮಾಸ್ತರ?"

"ಯಾಕ, ಏನು ಆಗ್ಯದ?" ನಾ ಅಂದೆ.

ನನಗ ಹಬ್ಬಿದ ಸುದ್ದಿ ಗೊತ್ತಿತ್ತು. ಆದರ ನಾನ ಹ್ಯಾಂಗ ಅದನ್ನ ಕೇಳಲಿ?

ಈ ಮಾತು ಜನರಿಗೆ ಗೊತ್ತಿಲ್ಲ ಅನ್ನೋ ಸಮಾಧಾನವಾದರೂ ಅವಳಿಗಿರಲಿ. ನೆಲದ ಕಡೆ ನೋಡಕೊತ ಆಕಿ ಅಂದಳು,

"ನಾಕ ಮಂದ್ಯಾಗ ಮಾನಾ ಹೇಳಬೇಕು, ಅಪಮಾನ ಮನಸಿನ್ಯಾಗ ಇಟಗೊಬೇಕು. ಆದರ ಈಗ ನನ್ನ ಗಂಡ ಅಳತಿ ಮೀರ್ಯಾನ. ಹೀಂಗ ನಡಕೊಳ್ಳೊದು ನೆಟ್ಟಗೇನು?"

"ಏನು, ಜಗಳ ಆತ ಏನು?"

"ಜಗಳ ಆಗದ ಮತ್ತೇನಾದೀತು? ಇನ್ನೊಂದು ಮದುವಿ ಆಗತಾನಂತ !"

ನಾನು ಅಚ್ಚರಿಗೊಂಡಂತೆ ತೋರಿ ಅಂದೆ,

"ಯಾಕ, ಶೇಕು ಮತ್ತ ಇನ್ನೊಂದು ಮದುವಿನ? ಅದ್ಯಾಕ ಒಮ್ಮೆಲೆ ಮಾಡತಾನ?"

"ಒಮ್ಮೆಲೆ ಯಾಕ? ಕಾರಭಾರಿ ಸತ್ತ. ಒಳೆ ಚಲೋ ಮನಸ್ಯಾ. ಆದರ ಪ್ರಾಣಾ ಬಿಡೋ ಮುಂದ ನನ್ನ ಮನ್ಯಾಗ ಬೆಂಕಿ ಇಟ್ಟ ಹೋದ."

ಶೇಕೂನ ಹೆಂಡತಿಗೆ ಗಂಟಲ ತುಂಬಿಬಂದ್ಹಾಂಗ ಆಗಿ, ಆಕಿ ಕಣ್ಣಾಗ ನೀರುನಿಂತವು. ಕಣ್ಣೀರು ಸೆರಗಿಲೆ ಒರಿಸಿ, ಉಗುಳು ನುಂಗಿ ಕೆಳದನ್ಯಾಗ ಅಂದಳು,

"ಹಗಲೆಲ್ಲ ಆ ಹುಡುಗಿ ಹಿಂದಿಂದ ಇರತಾನ. ಆ ಹುಡುಗಿಯಾರ ಏನು? ವಯಸ್ಸಿನ್ಯಾಗ ಬಂದ ಹುಡುಗರ ಮುಂದ ಮುರಕಾ ಹೊಡಕೊತ ಇದ್ದಾಂಗ, ಇವನ ಮುಂದ ಮಾಡತಿರತಾಳೆ. ಇದನ್ನ ನೋಡಿ ನಾ ಹ್ಯಾಂಗ ಸುಮ್ಮಸಿರಲಿ? ಆಕಿಗೆ ಬುದ್ಧಿ ಇಲ್ಲ! ಬುದ್ಧಿ ಯಾಕ ಇಲ್ಲ? ' ದೊಡ್ಡಾಕಿ ಆಗ್ಯಾಳ, ವಯಸ್ಸಿನ್ಯಾಗ ಬಂದಾಳ. ಆಕಿಗೆ ಒಂದು ನಾಚಿಗೆ ಇಲ್ಲ! ಇವ ಯಾಕ ಆಕಿ ಬೆನ್ನಹತ್ತಬೇಕು? ಜನದ್ದ ಇಲ್ಲದಿದ್ದರ ಮನಸಿಂದಾರ ನಾಚಿಗೆ ಬೇಕೋಬ್ಯಾಡೊ? ನಿಮ್ಮಂಥಾವರು ಏನಂದಾರು? ಜೋಪಾನ ಮಾಡಲಿಕ್ಕೆ ಅಂತ ಒಪ್ಪಿಸಿದ ಹುಡುಗಿ. ಚಲೊ ಹುಡುಗನ್ನ ನೋಡಿ ಮದುವಿಮಾಡಿ, ನಾಲ್ಕಮಂದಿ ಕಡಿಂದ ಹೂಂ ಅನಿಸಿಕೊಬೇಕು. ಅದನ್ನ ಬಿಟ್ಟು ತಾನ ಆಕಿ ಬೆನ್ನಹತ್ಯಾನ. ಇದೇನು ಚಲೊ ಏನರಿ?"

ನಾನು ಅಚ್ಚರಿಗೊಂಡಾಂಗ ತೋರಿಸಿ, ಸ್ವಲ್ಪ ಸಿಟ್ಟಿಗೆ ಬಂದ್ಹಾಂಗ ಮಾಡಿ ಅಂದೆ,

"ನೀವ ಹೇಳತಿರಿ ಅಂತ ನಂಬತೇನಿ. ಇಲ್ಲದರ ಶೇಕು ಅಂದರ ಒಂದ ಒಣಯಲಿ ಸಹ ತುಳಿಯುವ ಅಲ್ಲ. ಅವ ಹೀಂಗ ಮಾಡೋದು ಅಸಾಧ್ಯ. ಆದರ ಯಾವಾಗ ನೀವ ಬಂದ ಹೇಳತೀರಿ, ಅಂದಮ್ಯಾಲೆ ನಂಬಬೇಕು ಉಪಾಯ ಇಲ್ಲ."

"ನಾ ಯಾಕ ಸುಳ್ಳ ಹೇಳಲಿರೀ? ಇದರಾಗ ಅವನ ಒಬ್ಬಂದ ಹೆಸರ ಕೆಡತೈತಿ ಏನು? ನನ್ನ ಹೆಸರು ಬದನಾಮು ಆಕ್ಕೈತಿ. ಕಂತಿಗಿತನಕ ಬರೋ ಮಂಟ, ಇಂಥ ಮಾತು ಮಂದಿ ಮುಂದ ಯಾರ ಹೇಳತಾರ?"

"ಛೀ, ಇದು ತೀರ ಹುಚ್ಚತನ. ವಯಸ್ಸೇನು ಈ ಮಾತೇನು? ಇಷ್ಟ ದಿನ ಗಳಿಸಿದ ಹೆಸರು ಮಾತ್ರ ಕಳಕೋತಾನ!"

ಇದರಿಂದ ಶೇಕೂನ ಅಪಮಾನ ಆತ ಅಂತ ಅನಿಸಿ ಆಕಿ ಸಾವರಿಸಿಕೊಂಡು ಅಂದಳು,

"ಅವ ಏನು ಆ ಹುಡುಗಿನ್ನ ಮಂಳುಗಸಾಕ ಹೊಂಟಿಲ್ಲ. ಆಕಿ ಸಂಗತಿಲೆ ಮಂದುವಿ ಮಾಡತೇಸಿ ಅಂತಾನ!"

"ಆದರ ಇದೇನು ಯೋಗ್ಯವಲ್ಲ! ಈಗ ಅವಗ ಮದುವಿ ಗರಜಾರ ಏನದ?"

"ನನ್ನ ಹೊಟ್ಟಿಲೆ ಮಂಕ್ಕಳಿಲ್ಲ. ಮಕ್ಕಳುಬೇಕು ಅಂತ ಮಂದುವಿ ಮಾಡಾವ!"

ಇದನ್ನು ಕೇಳಿ ನಾನು ಸುಮ್ಮನಾದೆ. ನನ್ನ ಮಂಖ ನೋಡಿ ಆ ಜಾಣ ಹೆಣಮಂಗಳು ನಾ ಏನು ಅನಬೇಕು ಅಂತ ಮಾಡಿದ್ದೆ ಅದನ್ನು ತಿಳಕೊಂಡು ಅಂದಳು,

"ಮಂಕ್ಕಳಿಲ್ಲ ನಿಜ, ಆದರ ಇವಂದೇನು ಆಸ್ತಿ ಹಾಳಾಗಿ ಹೊಂಟದ? ಮಂತ್ತ ಮ್ಯಾಲೆ, ನಮ್ಮ ಪುಣ್ಯ ಇದ್ದರ ದೇವರು ಮಂಕ್ಕಳನ್ನು ಕೊಟ್ಟಾನು, ಅಲ್ಲರಿ?"

"ಹಾಂಗ ಇದ್ದರ ಒಬ್ಬ ಚಲೊ ಹುಡುಗಿ ನೋಡಿ ಮಂದುವಿಮಾಡು......"

"ಅದ್ಯಾಕ ಬೇಕರಿ? ಈಗ ಇಬ್ಬರ ಹೊಟ್ಟೀನ ತುಂಬಬೇಕಾರ ಸಾಕಾಗ್ಯದ! ನೀವ ನೋಡತಿರಲ್ಲ. ಮತ್ತ ಮಾಡಿಕೊಂಡ ಹುಡುಗಿ ಆದರ ಬಸರ ಆಗತಾಳಂತ ಏನು ಖಾತ್ರಿ? ದೇವರ ಮಂನಸಿನ್ಯಾಗ ಇದ್ದರ ಬಂಜೀನೂ ಬಸರಾದಾಳು!"

ಆಕಿ ಅಂದದ್ದು ಕೇಳತಿದ್ದೆ. ನಡುವ ಏನಾರ ಮಾತಾಡತಿದ್ದೆ. ದೊಡ್ಡ ಕುಂಕುಂಮ ಹಚಿಕೊಂಡ ಈ ಹೆಣಮಗಳ ಮಾತು ಒರಟಿದ್ದವು. ಮಾತ ಅಡೇಅಡತಿದ್ದಳು. ಗಂಡನ ಸಂಗತಿಲೆ ಹೊಲದಾಗ ದುಡಿಯುವಾಕಿ, ಎತ್ತಿನ ಜೋಡಿ ರಂಟೀ ಜಗ್ಗೊ ಆಕಿ, ಗಂಡನ ನಡತೆ ನೋಡಿ ಪೇಚಿನ್ಯಾಗ ಸಿಕ್ಕಿದ್ದಳು. ಅಂಜೀ ಕೂದಲಾ ಹಿಡಿದು, ಆಕಿನ್ನ ಮಂನಿಬಿಟ್ಟು ಹೊರಗಹಾಕೋದು ಈಕಿಗೇನು ಕಠಿಣವಿದ್ದಿಲ್ಲ. ಆದರ ಹಾಂಗ ಮಾಡದ ಒಬ್ಬ ಮಾಸ್ತರನ ಮುಂದ ನಿರಾಶಳಾಗಿ ಕೂತಿದ್ದಳು. ಕಣ್ಣೀರು ಸುರಿಸತಾ ಇದ್ದಳು. ಮೂಗು ತಂಟಿ ನಡಗತಾ ಇದ್ದವು. ನನ್ನ ಮನಸಿನಲ್ಲಿರುವ ವಿಚಾರಗಳು, ಆಕಿ ಮಂನಸಿನಲ್ಲಿಯೂ ಬಂದಿರಬೇಕು. ಅಂಜೀದಾರ ಏನು ತಪ್ಪು? ಇದೀಗ ವಯಸ್ಸಿನ್ಯಾಗ ಬಂದಿದ್ದಳು. ಚಲೋದು ಕೆಟ್ಟದು ಯಾವುದೆಂಬ ವಿಚಾರ ಮಾಡುವ ವಯಸ್ಸು ಅವಳದಿರಲಿಲ್ಲ. ಶೇಕೂ ಆಕಿಕಡೆ ಆಕರ್ಷಿತ ಆಗೋದು ಸಹಜ. ಆದರ ಈ ಪ್ರಸಂಗವೂ ನಾಜೂಕಾಗಿತ್ತು. ಇಲ್ಲಿ ಮುಂಗೈ ಜೋರಿಗೆ ಅವಕಾಶವಿರಲಿಲ್ಲ. ಈ ಜಾಣ ಹೆಣಮಂಗಳು ಇದನ್ನೆಲ್ಲ ಅರಿತಿರಬೇಕು. ಇಲ್ಲದಿದ್ದರ ನನ್ನಂಥ ಸಂಬಂಧ ಇಲ್ಲದವನ ಮುಂದ ಬಂದು ಈ ಪುರಾಣ ಹೇಳತಿದ್ದಿಲ್ಲ.

"ಶೇಕು ಮಾಡೋದು ಯೋಗ್ಯವಲ್ಲ" ಎಂದು ನಾನು ಪದೇಪದೇ ಅನ್ನತಿದ್ದೆ. ಕೊನೆಗೆ ಶೇಕೂನ ಹೆಂಡತಿ ಅಂದಳು,

"ಮಾಸ್ತರ, ನೀನು ಈ ಊರ ಹಿರಿಯು ಅಂತ ನಿನ್ನ ಮಂಂದ ಹೇಳಿದೆ. ಮಂತ ಸರಕಾರತನಕನೂ ನಿನ್ನ ಹೆಸರೈತಿ. ನೀ ನನ್ನ ಗಂಡಗ ಸ್ವಲ್ಪು ಬೆದರಸು. ಏನಾರ ಕೆಲಸ ಆದರ ನಿನ್ನಿಂದ ಆಗಬೇಕು!"

"ಹೌದವ್ವ, ಇದೆಲ್ಲ ಮಂನೆಮಾತು. ನಾ ಹೇಳಿದರ ಅವ 'ನೀ ಯಾರ ಕೇಳವ?' ಅಂದರ ನಂದೇನು ಉಳೀತು?"

ಕೈ ಬೀಸಕೋತ ಶೇಕೂನ ಹೆಂಡತಿ ಅಂದಳು,

"ನಿನಗ ಹಿಂಗನ್ನೊ ಕುವತ್ತ ಅವಂದು! ಹೋದಾನ ಬೇಡಿ ಹಾಕ್ಕೊಂಡು. ಅಷ್ಟ ತಿಳಿತದ ಅವಗ......"

ಇಷ್ಟರಾಗ ಸಾಲಿ ಘಂಟಿ ಆತು. ಆಯುಬೂ, ಸತಾ ಬಂದರು. ಶೇಕೂನ ಹೆಂಡತಿ ಎದ್ದು ಅಂದಳು,

"ಬರತೇನಿ."

ಆಕಿ ಹೋದಳು. ಕಡಲೆಕಾಯಿ ಅಲ್ಲೆ ಇದ್ದವು. ಅವನ್ನ ನೋಡಿ ಆಯುಬೂ ಅಂದ,

"ಮಾಸ್ತರ, ನಾನೀ ಶೇಂಗಾ ತಂದಿದ್ದಳೇನು?"

"ಹೌದು,-ಯಾಕೋ?"

"ಹಾಂಗೆನಿಲ್ಲ. ಎಂದೂ ಏನೂ ಕೊಡದಾಕಿ ಇವತ್ತ ತಂದಿದ್ದಳು. ಅದಕ್ಕ ಕೇಳಿದೆ."

ಆಯುಬೂ ಅಂದದ್ದರ ಮ್ಯಾಲಿಂದ ಏನು ತಿಳಕೊಳ್ಳೋದು ನಾನು ತಿಳಕೊಂಡೆ. ಅವ ಶೇಂಗಾ ತುಂಬಿ ಇಟ್ಟ. ಬಾಗಲ ಮುಂದ ಮಾಡಿ ನಾನು ಸಾಲಿಗೆ ಹೋದೆ. ಇದರೊಳಗಿಂದೇನೂ ಆಯುಬೂಗ ಗೊತ್ತಿರಲಿಕ್ಕಿಲ್ಲ ಅಂತ ನಾನು ಭಾವಿಸಿದ್ದೆ. ' ಅವ ಸಹಜ ಏನೋ ಅಂದಿದ್ದ, ಅದರ ಅಪಾರ್ಥ ನಾ ಮಾಡಿಕೊಂಡಿರಬಹುದು.

ಮುಂದ ಹಾದ್ಯಾಗ ನಾಕಾರ ಸಾರೆ ಶೇಕು ಭೆಟ್ಟಿ ಆದ. ಸಾಮಾನ್ಯವಾಗಿ ನನಗೆ ಬೆಟ್ಟಿ ಆದಾಗ ಅವ ನನ್ನ ನೋಡಿ ನಗತಿದ್ದ. ಆದರ ಈಗ ನಗಲಿಲ್ಲ. 'ಏನ ಗಡಿಬಿಡಿ ಮಾಸ್ತರ' ಅಂತೂ ಅನಲಿಲ್ಲ. ದೂರಿಂದ ನಾ ಕಂಡರ ಮುಖ ಕೆಳಗೆ ಮಾಡಿ ಹೋಗಾವ. ಹಿಂಗ ದೂರದೂರ ಇದ್ದ ಅಂತ ನಾನೂ ಅವಗ ಅಂಜೀ ವಿಷಯದಲ್ಲಿ ಏನೂ ಕೇಳುವ ಧೈರ್ಯ ಮಾಡಲಿಲ್ಲ. ಈಗ ಅವರ ಸಂಬಂಧ ಬೆಳದದ ಅಂತ ಕೇಳಹತ್ತಿದೆ. ಇಬ್ಬರೂ ಕೂಡಿ ಕುರಿಹಿಂಡ ಕಾಯಲಿಕ್ಕೆ ಹೋಗತಾರ, ಹಾದ್ಯಾಗ ಶೇಕು ಅಂಜೀ ವೈಗೆ ವೈ ತಿಕ್ಕೊತ ಹೋಗತಾರಂತ ಜನ ಹೇಳಿದರು. ಇವತ್ತ ಮಾವಲಿಆಯಿ ಗುಡ್ಡದಾಗ ಆಣೆ ಮಾಡಿದರು. ದೇವಿ ಕುಬಸ ಮುಟ್ಟಿ ತಾ ಶೇಕೂನ್ನ ಎಂದೂ ಬಿಡಂದಿಲ್ಲ ಅಂತ ಅಂಜೀ ನಿಶ್ಚಯ ಮಾಡಿದಳು. ನಾಡದ ಶೇಕು ಕುರಿ ಮಾರಿ, ಅಂಜೀಗ ಬೆಳ್ಳಿ ತೊಡೆ ಮಾಡಿಸಿದ—ಹೀಂಗ ಒಂದಲ್ಲ ಬಹಳ ಮಾತು ತಿಳಿಯುಹತ್ತಿದವು.

ಶೇಕೂನ ಈ ಪ್ರೇಮಪ್ರಕರಣ ತರುಣ ಹುಡುಗರ ನಗಚ್ಯಾಟಗಿ ವಿಷಯವಾಗಿತ್ತು. ಹಿರಿಯರ ಮನಸಿಗೆ ಬರತಿದ್ದಿಲ್ಲ.

ಒಂದು ದಿನ ಶೇಕು ಮತ್ತು ಅವನ ಹೇಡತಿ ನಡುವ ತೀವ್ರ ಬಡದಾಟ ಆತು. ನಡರಾತ್ರಿ ತಮ್ಮತಮ್ಮೊಳಗ ಮನ್ಯಾಗ ಬಡಿದಾಡಿದರು. ಮರುದಿನ ಹೆಂಡತಿ ಊರಾಗ ಬ್ಯಾರೆ ಮನಿ ಮಾಡಿದಳು. ಧೂಳಾ ಕುರುಬನ ದನದ ಮನಿ ಖಾಲಿ ಇತ್ತು. ಅಲ್ಲೆ ಮೂರ ಕಲ್ಲಿಟ್ಟು ಒಲೆ ಹೂಡಿದಳು. ತನ್ನ ಹೊಲದ ಕಡೆ ಲಕ್ಷ ಕೊಡದ, ಕೂಲಿ ಕುಂಬಳಿ ಮಾಡಿಕೊತ ಇದ್ದಳು.

ಅಂಜೀ ಶೇಕು ಕೂಡಿ ಇರಹತ್ತಿದರು. ಶೇಕು ಮದುವಿ ವ್ಯವಸ್ಥಾ ನಡಿಸಿದ್ದ, ಕಾಳು ಕೂಡಿಸಿದ, ಕುರಿ ಮಾರಿ ರೋಖ ರೂಪಾಯಿ ಕೂಡಿಸಿಟ್ಟ.

ಶೇಕೂನ ಹೊಲ ಊರಿನಿಂದ ದೂರ ಇತ್ತು. ಅವನ ಹೊಲದಾಚೆಗಿದ್ದ ತೋಟ, ಯೆಡಶಿ ಊರಿನವರದಿತ್ತು. ಆ ತೋಟದಲ್ಲಿ ಕುರಿ ಕೂಡಿಸತಿದ್ದರು. ಎರಡನೆ ಊರ ಕುರುಬರು ಬಂದಿದ್ದರು. ಇಡೀ ರಾತ್ರಿ ಕುರಿ ಕಾಯೂವರು ಹಾಡಿಕೋತ ಕಾಸಿಕೋತ ಕೂತಿದ್ದರು. ಅವರ ಹಾಡಿನ ದನಿ ಅಂಜೀಗೆ ಶೇಕೂನ ಹೊಲದಾಗ ಕೇಳಿಸತಿತ್ತು.

ಒಂದು ದಿನ ಮಧ್ಯಾನ್ಹ ಆ ಕುರಿ ಕಾಯುವರ ಪೈಕಿ ಒಬ್ಬ ತರುಣ, ಬಿರುದಮಾಲಿನ ಬದುವಿನ ಮ್ಯಾಲಿದ್ದ ಜಾಲಿಗಿಡ ಹತ್ತಿ ಕೋಲಲೆ ಎಲಿ ಬಡದು ಕೆಳಗೆ ಕೆಡವತಿದ್ದ. ಅವನ ಕುರಿ ಆ ಯಲಿ ಸುತ್ತ ಮುಕ್ಕರಿದ್ದವು. ಮುಳ್ಳಬಿಟ್ಟು ಯಲಿ ಅಷ್ಟ ತಿನತಿದ್ದವು. ಬಿದ್ದ ಜಾಲೀಕಾಯಿನೂ ತಿನತಿದ್ದವು.

ಅಂಜೀ ಜೋರಲೆ ಮುಂದೆ ಬಂದು ಗಿಡಹತ್ತಿದವನಕಡೆ ನೋಡಿ ಅಂದಳು,

"ಯಾರ ಆವ, ಜಾಲಿಗಿಡ ಬಡಿಯಾವ?"

ಕುರಿಕಾಯಾವ ತಳಗ ನೋಡಿ ಅಂದ,

"ನೀ ಯಾಕ ಕೇಳತಿ? ನಿಂದೇನು ಹರಕತ್ತದ?"

ಯಾಕ ಅಂತ ಅವ ಅಂದದ್ದ ಕೇಳಿ ಅಂಜೀ ಮೈ ನವಿರೆದ್ದಿತು. ಅಷ್ಟರಾಗ ಮ್ಯಾಲಿಂದ ಜಾಲಿಹೂವು ಪಟಪಟ ಬೀಳಹತ್ತಿದವು. ಕುರಿಕಾಯುವನು ಲಗುಲಗು ಇಳದಬಂದ. ಕಪ್ಪಿದ್ದ, ನೀಟಮೂಗಿನ ಆ ತರುಣ ಒಳೆ ಸಡಗರದಿಂದ ಬಂದು ಅಂಜೀ ಮುಂದ ನಿಂತ, ಅವನ ಕಡೆ ಕಣ್ಣೆತ್ತಿ ನೋಡೊ ಧೈರ್ಯ ಆಕಿಗೆ ಆಗಲಿಲ್ಲ. ಆಕಿ ಎದಿ ಡವಡವ ಅನತಿತ್ತು. ಸುತ್ತಲ ಯಾರೂ ಇದ್ದಿಲ್ಲ, ಜಾಲಿನೆರಳಾಗ ಕುರಿ ಯಲಿ ಮೇಯತಿದ್ದವು. ಮುಗುಳುನಗುತ್ತ ಆವ ಅಂಜೀ ಇದುರ ಬಂದು ನಿಂತಿದ್ದ. ಅವ ಅಂದ,

"ಹೊರಗಿನವರ ಬಂದರ ಅವರ ಜೋಡಿ ಹುಂಬನ್ಹಾಂಗ ಮಾತಾಡೋದೇನು? ಹಾಂಗ ಮಾತಾಡಬಾರದು. ಈ ಹೊಲ ನಿಂದೇನು?"

ತಳಗ ನೋಡಕೊತ ಅಂಜೀ ಧೈರ್ಯದಿಂದ ಅಂದಳು,

"ನಂದೈತಿ ಅಂತ ಮಾತಾಡಿದೆ."

ತರುಣ ಅಂದ,

"ಒಳೆ ಬೆಳೆದುನಿಂತ ಜಾಲಿ ನೋಡಿದೆ, ಸವರಿದೆ." ಹೀಗಂದು ಧೈರ್ಯದಿಂದ ಅಂಜೀ ಕೈಹಿಡಿದ. ಅಂಜೀ ಒದರಲಿಲ್ಲ, ಬಿಡ ಅನಲಿಲ್ಲ. ಸ್ವಲ್ಪ ಧಡಪಡಿಸಿದಳು, ಆದರ ಕೈ ಬಿಡಿಸಿಕೊಳ್ಳೋದು ಆಗಲಿಲ್ಲ. ಅವನ ಕಣ್ಣಿನಕಡೆ ನೋಡಕೊತ ಅಸಹಾಯಳಾಗಿ ಅಂದಳು,

"ಬಳಿ ಒಡಿತ ಅಲ್ಲ! ನನ್ನ ಕೈ ಬಿಡಲ್ಲ,"

"ಬಿಡಾಕ ಓಡಿದಿಲ್ಲ, ಏನ ಮಾಡತಿ?"

"ಅಂ ಹಂ......ಒಳೆ ಚೋರ ಕಾಣತೈತಿ, ಬಿಡು ಕೈ."

ಕುರುಬ ನಕ್ಕೊತನ ಹಾಂಗss ನಿಂತ.

ನಾಲ್ಕೈದು ದಿನ ಕುರಿಕೂಡಿಸಿ, ಕೊಟ್ಟ ಜೋಳ ತಗೊಂಡು ಆ ಕುರಿಕಾಯಾವ ತಮ್ಮೂರಿಗೆ ಹಿಂಡ ಕಟಗೊಂಡ ಹೋದ. ಹೋಗೊ ಮುಂದ ಅಂಜೀನ್ನೂ ಸಂಗತಿಲೆ ಕರಕೊಂಡು ಹೋದ. ಆಕೀನೂ ಹೋದಳು. ಆಕಿ ಶೇಕೂಗ ಹೇಳಲೂ ಇಲ್ಲ, ಕೇಳಲೂ ಇಲ್ಲ. ದೇವಿ ಕುಬಸದ ಆಣೆ ಮರೆತಳು. ಇನ್ನೊಬ್ಬವನ ಮದುವಿ ಮಾಡಿಕೊಂಡು ಹೋದಳು.

ಹತ್ತುಹದಿನೈದು ದಿನಾ ಬಿಟ್ಟು ಶೇಕೂನ ಹೆಂಡತಿ ಗಜ್ಜರಿ ತಗೊಂಡು ಬಂದಳು. ಆಕಿ ಮುಖ ಅರಳಿತ್ತು. ಗಜ್ಜರಿ ಸುರವಿ ಅಂದಳು,

"ನಮ್ಮ ಹುಂಚ್ಚ ತಿರುಗಿ ಬಂತು."

ಮಾವಲಿದೇವಿ ಜಾತ್ರೆ ಬಂತು. ಬನಗರವಾಡಿಯಲ್ಲಿ ಪ್ರತಿವರ್ಷ ಈ ಜಾತ್ರೆ ಜರಗುತ್ತದೆ. ಊರಿಂದ ಒಂದು ಪ್ಯೆಲಿನ ಮ್ಯಾಲೆ ಒಂದು ದಿನ್ನಿ ಅದ. ಅಡವ್ಯಾಗ ಇದ್ಹಾಂಗ ಒಂದು ಗುಡಿಸಲ ಆ ದಿನ್ನೆಯ ಮ್ಯಾಲೆ ಅದೆ, ಆ ಗುಡಿಸಲದಾಗ ಮಾವಲಿದೇವಿ ಕೂತಾಳ. ಸುತ್ತಮುತ್ತಲೆಲ್ಲ ಕಲ್ಲಕಲ್ಲು, ಎರಡು ಮೂರು ಫೂಟು ಎತ್ತರದ ಕಂಟಿ. ಗಿಡ ಅಂತೂ ಇದ್ದೇ ಇಲ್ಲ. ಕುರುಬರಿಗೆ ಒಲಿದ ದೇವತೆ ಇವಳು. ಹಾಗಾದರೆ ಈಕಿ ಇನ್ನೂ ಗುಡಿಸಲದಾಗ ಯಾಕ ಇದ್ದಾಳ? ಊರವರು ಒಂದು ಗುಡಿ ಯಾಕ ಕಟ್ಟಿಸಿಲ್ಲ? ಒಮ್ಮೆ ಇಂಥ ಒಂದು ಪ್ರಯತ್ನ ಆತಂತ. ಆದರ ದೇವಿ ರಾತ್ರಿ ಪೂಜಾರಿ ಕನಸಿನ್ಯಾಗ ಬಂದ ಹೇಳಿದಳು, "ಗುಡಿ ಕಟ್ಟಬ್ಯಾಡರಿ, ಗುಡಿಸಲದಾಗ ನಾ ಆನಂದವಾಗ ಇದ್ದೇನಿ."

ಈ ನಿರ್ಜನ ಭಾಗಾದಾಗ ವಾಡಿ ಜನ, ಹೊಸ ಅಂಗಿ, ಸೀರಿ, ಕಂಬಳಿ ತೊಟ್ಟು ಕೂಡಿದರು. ಸುತ್ತಮುತ್ತಲಿನ ಊರಿನ ಭಕ್ತರೂ ಬಂದಿದ್ದರು. ಒಟ್ಟು ನೂರು ನೂರಾ ಐವತ್ತು ಜನ ಕೂಡಿದ್ದರು. ಪೂಜಾರಿ ಪೂಜೆ ಮಾಡಿದ, ಜನರಿಗೆಲ್ಲ ಗುಲಾಲ ಹಚ್ಚಿದ.

ಊರಿಗೆ ಇದುರು ನಿಂತ ಬಾಳಾ ಬನಗರನೂ ಬಂದ. ಹೆಂಡರು ಮಕ್ಕಳನ್ನ ಕಟಿಕೊಂಡು ಬಂದಿದ್ದ. ಅವನ್ನ ಕಂಡು ಊರ ಜನರಲ್ಲಿ ಗುಜುಗುಂಜು ನಡೆಯಿತು. ಅವಗ ದೇವಿದರ್ಶನ ಬ್ಯಾಡ, ಅವಗ ಅಲ್ಲೆ ನಿಲ್ಲಿಸಿರಿ ಅಂತ ಒಂದು ಗೊಂದಲವೆದ್ದಿತು. ಆದರ ಯಾರನೂ ಕೇಳದ ಅವ ಹೋಗಿ ದೇವಿ ಮುಂದ ಅಡ್ಡಾದ, ಪ್ರಸಾದದ ಗುಲಾಲ ಹಚ್ಚು ಅಂತ ಪೂಜಾರಿ ಮುಂದ ಹಣಿಮಾಡಿ ನಿಂತ. ಆಗ ಪೂಜಾರಿ ಅಂದ, "ನೀನು ದೈವದ ಮಾತ ಮೀರೀದಿ. ನಾ ಏನು ನಿನಗ ಗುಲಾಲ ಹಚ್ಚುದಿಲ್ಲ." ಇಂಥಾ ಸೊಕ್ಕಿನ ಮನಷ್ಯಾ ಬಾಳಾ, ಆದರ ದೇವಿ ಪ್ರಸಾದದ ಗುಲಾಲ ಹಚ್ಚುದಿಲ್ಲ ಅಂದಕೂಡಲೆ ತಣ್ಣಗ ಆದ. ಜನರ ಕಡೆ ಮುಖ ಮಾಡಿ ನಿಂತ. ತಿಂಗಳಾನಗಟ್ಲೆ ಅನೇಕ ತೊಂದರೆಗಳಿಗೆ ಈಡಾಗಿದ್ದ. ಊರವರು ಯಾರೂ ಅವನೊಡನೆ ಮಾತಾಡ ತಿರಲಿಲ್ಲ. ಹಿರೇಬ್ಯಾನಿ ಬಂದವರ್ಹಾಂಗ ಅವನ್ನ ಊರ ಹೊರಗ ಇಡಲಾಗಿತ್ತು. ಇದತ್ತ ಆ ಮಾತಿನ ತುದಿ ಮುಟ್ಟಿದ್ಹಾಂಗ ಆತು. ದೇವಿ ಪ್ರಸಾದ ಸಿಗಲಿಲ್ಲ! ಜನರ ಕೊಟ್ಟ ಎಲ್ಲ ತೊಂದರೆಗೆ ಬಾಗದ ಬಾಳಾ. ಇಂದು ಈ ಉಪೇಕ್ಷೆಯಿಂದ ಮೆತ್ತಗಾದ. ಧೋತರದ ನೀರಿಗಿ ಫರಾಫರಾ ಬಿಚ್ಚಿ, ಜನರ ಇದುರು ಧೋತರ ಹಾಸಿ ಒದರಿ ಅಂದ,

"ದೈವದ ಮುಂದ ಸೆರಗು ಒಡ್ಡಿ ಕ್ಷಮಾ ಬೇಡತೇನಿ. ಮತ್ತ ನನ್ನ ನಿಮ್ಮೊಳಗ ಕರಕೊಳ್ಳರಿ. ನನ್ನ ಗಿಡ ಕೊಡತೇನಿ, ತಗೊಳ್ಳರಿ. ಬೇಕಾರ ನನ್ನ ಪ್ರಾಣ ತಗೊಳ್ಳರಿ, ಆದರ ನನಗ ಹೀಂಗ ದೂರಸರಸಬ್ಯಾಡರಿ!"

ಅವನ ಗಂಭೀರ ಧ್ವನಿ ನಡಗಹತ್ತಿತು. ಕಣ್ಣಾಗಿಂದ ಧಾರಾಕಾರವಾಗಿ ನೀರ ಹರಿಯಹತ್ತಿದವು. ಒಂದುಕ್ಷಣ ಎಲ್ಲರೂ ಬೆಪ್ಪಾಗಿ ನಿಂತರು.

ಆಮ್ಯಾಲೆ, ರಾಮನ ಮುಂದಕ ಕಾಕೂಬಾ ದೈವಕ್ಕ ಹೇಳಿದ, "ಮಂಗ ಹೇತರ ತೊಡಿ ಕೊಯ್ಯೋದು ಐತೇನು? ಹಚ್ಚ ಅವಗ ಗುಲಾಲ!"

ದೈವದಾಗ ಗುಜುಂಗುಜು ನಡೀತು. ಎಲ್ಲಾರು, 'ಹಚ್ಚರಿ ಗುಲಾಲ' ಅಂದರು. ಪೂಜಾರಿ ದೈವದ ಮುಂದ ಸೆರಗು ಒಡ್ಡಿ ನಿಂತ ಬಾಳಾನ ಹಣೆಗೆ ಗುಲಾಲ ಹಚ್ಚಿ ಅಂದ,

"ಉಧ, ಉಧ, ಉಧ......"

ಜನರೂ ಉಧ, ಉಧ, ಉಧ ಅಂದರು. ಗುಲಾಲ ತೂರಿದರು, ಮುಂಪ್ಪಿ ಮುಂಪ್ಪಿಲೆ ತೂರಿದರು. ಗಜ್ಜುರಿ ಗೆಣಸೂ ತೂರಿದರು. ಪ್ರಸಾದ ತಗೊಳಲಿಕ್ಕೆ ಎಲ್ಲರೂ ಬಗ್ಗಿದರು. ಒಂದ ಗೊಂದಲ, ಚೀರಾಟ!

ಹೋಲೆಯ ಡಫ ಬಾರಿಸಿದ, ಢೋಲ ಹೊಡೆದ, ಕಾಳಿ ಊದಿ ಆಯಿತು. ಪ್ರತಿ ವರ್ಷದಂತೆ ಧೂಳಾ ಕುರುಬನ ಮೈಯಾಗ ಒಂತು. ಹಾಂ ಹೂಂ ಅನ್ನಲಿಕ್ಕೆ ಹತ್ತಿದ. ಮೈ ನಡಗಾರ ಹತ್ತಿತ್ತು. ಕೈ ಬೀಸಾಕ ಹತ್ತಿದ. ಹೋಲೆಯ ಲಗುಲಗು ಢೋಲ ಬಾರಿಸಲಿಕ್ಕೆ ಹತ್ತಿದ. ಅದರ ವೇಗದ ತಾಲದಾಗ ಧೂಳಾ ಕುಣಿಯಲಿಕ್ಕೆ ಹತ್ತಿದ. ಮೈಮ್ಯಾಲಿನ ಕಂಬಳಿ ಒಗೆದ, ತಲಿಮ್ಯಾಲಿನ ಪಟಕಾ ತೂರಿದ. ಬರಿಮೈ ಧೂಳಾ ನಿಂತಲ್ಲೆ ಧನಿ ತಗಿಯಲಿಕ್ಕೆ ಹತ್ತಿದ. ಪೂಜಾರಿ ಅವನ ಹಣೀತುಂಬ ಗುಲಾಲ ಹಚ್ಚಿದ. ಕರೆ ಹಣಿಮ್ಯಾಲಿ ತುಂಬಾ ಕೆಂಪನ್ನ ಗುಲಾಲ. ಅದು ಹಾಂಗ ಮೂಗಿನ ಮ್ಯಾಲೆ ಇಳೀತು; ಧೂಳಾ ಕುಣಿಯಾಕ ಹತ್ತಿದ.

"ಅಮ್ಮ ಬಂದಳು. ಅಮ್ಮ ಬಂದಳು!" ಅಂತ ಕುರುಬರು ಅವನ್ನ ಸುತ್ತ ಗಟ್ಟಿದರು.

ಆಗ ಶೇಕು ಕೇಳಿದ,

"ತಾಯೀ, ಇನ್ನೂ ಮಳೀನ ಆಗಿಲ್ಲಲ್ಲ? ನಮ್ಮದೇನಾರ ತಪ್ಪ ಆಗ್ಯತೇನು?"

ತಾಯಿ ಧ್ವನಿ ಜೋರಲೆ ಅಂದಳು,

"ಹೌದು, ಪಾಪ ಬಹಳ ನಡೆದಾವ. ಮೋಸಮಾಡೋದು ಹೆಚ್ಚಾಗ್ಯತಿ! ಅದಕ್ಕ ಮಳಿ ಹೋತು!"

"ಅದಲ್ಲ ಖರೆ. ಆದರ ನಾವ್ಹ್ಯಾಂಗ ಬದಕಬೇಕು? ನಮ್ಮ ಕುರಿ ಗತಿ ಏನು? ಏನು ತಿನಬೇಕು?"

ಕಣ್ಣಮುಂಚ್ಚಿ ತಾಯಿ ಅಂದಳು,

"ನನ್ನ ಜಾತ್ರಿ ನೆಟ್ಟಗ ಮಾಡ್ರಿ — ನನಗ ನೈವೇದ್ಯ ನೀಡರಿ — ಎಲ್ಲರೂ ನೆಟ್ಟಗ ಆಕ್ಕೃತಿ......"

"ಮಂಳಿ ಬರತದ?"

"ಹೂಂ, ಬರತದ!"

"ತಾಯಿ, ಯಾವಾಗ ಬರತೈತಿ? ಮಿರಗ ಹೋತು, ಜಗತ್ತಿಗೆಲ್ಲ ಮಳಿ ಆತು, ನಮ್ಮ ವಾಡ್ಯಾಗ ಇಲ್ಲ, ಒಂದೂ ಮೋಡ ಕಾಣವಲ್ಲದು!"

"ನಿಮಗ ಪಾಠಾ ಕಲಿಸಿದೆ. ಮುಂದಿನ ನಕ್ಷತ್ರ ಭೀಳತೈತಿ."

ಶೇಕು ಕಪಾಳ ಕಪಾಳಕ್ಕ ಹೊಡಕೊಂಡು ಅಂದ,

"ತಾಯಿ, ತಪ್ಪಾತು, ಕ್ಷಮಾ ಮಾಡು. ನಿನಗ ನೈವೇದ್ಯ ನೀಡತೇವಿ, ಜಾತ್ರಿ ಅಭ್ರಾಟ ಮಾಡತೇವಿ, ಕಾಯಿ ಕೊಡತೇವಿ, ಎಲ್ಲ ಬರಾಬರಿ ಸಾಗಸತೇವಿ."

ಹೀಗಂದು ಧೂಳಾನ ಪಾದಾ ಮುಟ್ಟಿದ.

ಧೂಳಾನ ಮೈಯಾಗಿ ಬಂದದ್ದು ಹೋತು. ಅವ ಸುಮ್ಮನಾದ.

ಜನ ಜಾತ್ರಿ ಮಾಡಿದರು. ದೇವಿ ಮುಂದ ಕುರಿಕಡಿದರು. ಆಯುಬೂ ಕುರಿಗೆ ಚೂರಿಹಾಕಿದ. ಶೇಕು ರಕ್ತ ದೇವಿಗೆ ಹಚ್ಚಿ, ಮುಂದ ಪ್ರಸಾದ ಇಟ್ಟ. ಆಮ್ಯಾಲೆ ಸ್ವಲ್ಪು ಗದ್ದಲ ಗಡಿಬಿಡಿ ನಡೀತು. ಜನ ಕೂಡಿದರು. ಹುಡುಗರು ಗದ್ದಲ ಮಾಡಿ. ನೋಡಾಕ ಮುಂದಮುಂದ ಬಂದರು. ಆಗ ಆಯುಬೂ ಅವರೆಲ್ಲರನ್ನ ಬೆದರಿಸಿ ಅಂದ.

"ಹೋಗರಿ ಎಲ್ಲಾರೂ ಮನಿಗೆ. ರೊಟ್ಟಿ ತಗೊಂಡು ಎಲ್ಲಾರೂ ಊಟಕ್ಕ ಬರ್ರಿ. ಇಲ್ಲೆ ಮಸಾಲಿ ಮಾಂಸ ನೀಡತೇವಿ," ಬನಗರವಾಡಿ ಕುರಿ ಕೊಟ್ಟೀತು, ಆದರ ಜೋಳ ಎಲ್ಲಿಂದ ಕೊಟ್ಟೀತು? ಜನ ಚದುರಿದರು. ಕೆಲವರು ಅಲ್ಲಿ ಉಳಿದರು, ಅವರು ಒಲಿಹೂಡಿ ಬೆಂಕಿಹಾಕಿದರು. ಒಲಿಮ್ಯಾಲೆ ಹಂಡೆ ಇಟ್ಟರು. ಎರಡು ಮೂರು ಕುರಿಮಾಂಸ ಕುದಿಲಿಕ್ಕೆ ಇಟ್ಟರು. ಅದರ ಘಮಘಮ ವಾಸನೆ ಸುತ್ತಲೆಲ್ಲ ಹಬ್ಬಿತು.

ಬೆಳದಿಂಗಳು ಬಿತ್ತು. ಮಷಾಲು ಹಚ್ಚಿದ್ದರು. ರೊಟ್ಟಿ ಚರಗಿ ತಗೊಂಡು ಕುರುಬರು ಬಂದರು, ಅವರವರ ತಾಟಿನ್ಯಾಗ ಮಸಾಲಿಮಾಂಸ ನೀಡಲಾಯಿತು. ಜನ 'ಉಧ ಉಧ' ಅಂತ ಘೋಷಣೆ ಮಾಡಿದರು. ರೊಟ್ಟಿ ಮಾಂಸ ತಿನಲಿಕ್ಕೆ ಹತ್ತಿದರು. ಮಾಂಸದ ಮಸಾಲಿ ಖಾರದಿಂದ ಮೂಗಿನ್ಯಾಗ ಕಣ್ಣಾಗ ನೀರಬರತಿತ್ತು.

೨೦

ಮಾವಲಿದೇವಿ ವರ ಕೊಟ್ಟದಾಯಿತು. ಆದರ ಒಂದರ ಹಿಂದೊಂದು ಮಳಿನಕ್ಷತ್ರ ಹಾಂಗ ಹೋದವು. ಬನಗರವಾಡಿ ಮಳಿ ಕಾಣಲಿಲ್ಲ. ಕಾದ ಭೂಮಿ ತಂಪಾಗಲಿಲ್ಲ, ಗಿಡಗಂಟಿ ಒಣಗಿದವು. ಹಸಿರ ಸಿಕ್ಕದ್ದನ್ನೆಲ್ಲ ತಿಂದವು. ಧೂಳು ಹಾರಿತು. ದೆವ್ವದ ಗಾಳಿ ಬೀಸಿತು, ಭಾವಿ ಬತ್ತಿದವು. ವಾಡೀ ಭಾವಿ ನೀರ ತಳ ಕಂಡಿತ್ತು. ರಾಡೀ ನೀರ ಜಗ್ಗಲಿಕ್ಕೆ ಜನ ಇಡೀ ದಿನ ಗದ್ದಲ ಮಾಡತಿದ್ದರು. ಸಂಜೆಯಾದರೂ ಗುಬ್ಬಿಗೆ ಸಹ ನೀರು ಕುಡಿಯಲು ಸಿಗತಿರಲಿಲ್ಲ. ಇಡೀ ರಾತ್ರಿ ಮುಗಿದಾಗ ಸ್ವಲ್ಪ ಬಿಸಿನೀರು ಬಾವಿಯಲ್ಲಿ ಬರತಾ ಇತ್ತು. ಆದನ್ನ ತುಂಬಲಿಂದು ನಸುಕ ಹರಿಯೊದರೊಳಗ ಹೆಣಮಕ್ಕಳು ಹೋಗತಿದ್ದರು. ನೀರಿಗಾಗಿ ಕಾದಾಟ, ಬಡದಾಟ. ಕಾಗಿ ಏಳೋದರೊಳಗ ನೀರಿನ ಬಡದಾಟ ನಡೆಯುತಾ ಇತ್ತು.

ದನ ಸೊರಗಿ ಎಲುಬು ಕಾಣಹತ್ತಿದವು. ಅವುಗಳ ಮೈಮ್ಯಾಲೆ ಕರಡಿ ಹಾಂಗ ಕೂದಲ ಬೆಳೆದಿದ್ದವು. ಅವು ಅಸಹ್ಯ ಕಾಣಹತ್ತಿದವು. ಉಣ್ಣೆ ಕತ್ತರಿಸಿದ್ದರಿಂದ ಕುರಿ ಮತ್ತಿಷ್ಟು ಬಡಕಾಟಿ ಕಾಣಹತ್ತಿದವು. ಮೈಯಾಗ ಎಣ್ಣೀನ ಇದ್ದಿಲ್ಲ. ಛಪ್ಪರ ಮ್ಯಾಲಿನ ಹಳಿಮೇವು ಹಿರಿದು ದನದ ಮುಂದ ಚಲ್ಲಲಿಕ್ಕೆ ಹತ್ತಿದರು. ನೀರಿಗಾಗಿ ಕುರಿ ದೂರ ಒಯ್ಯಬೇಕಾತು. ಗುಬ್ಬಿ, ಕಾಗಿ, ಗೊರವಂಕ ಕಾಣದ್ಹಾಂಗ ಆದವು. ಹಸಿವಿನಿಂದ ಬಳಲುವ ಅಡವ್ಯಾಗಿನ ಇಲಿ ಊರ ಸೇರಿದವು. ಜನರಿಗೆ ಇದೊಂದು ಹೆಚ್ಚಿನ ತೊಂದರೆ. ಹಿಟ್ಟಿನ ವಾಸನೆ ಇದ್ದ ಮರಾ ಕತ್ತರಿಸಿದವು. ಕಂಬಳಿ ಕಡದವು, ಹಿಟ್ಟಿನ ಬುಟ್ಟಿನೂ ಕತ್ತರಿಸಿದವು.

ಜನರ ಮುಖ ಕಳೆಗುಂದಿದವು. ಜನರ ಕಣ್ಣಾಗ ಹಸಿವು ಕಾಣಹತ್ತಿತು. ಮನ್ಯಾಗಿನ ಕಾಳ ತೀರಿದಮ್ಯಾಲೆ, ರೂಪಾಯಿ ಎರಡು ರೂಪಾಯಿ ತಗೊಂಡು ಸಂತಾಗಿಂದ ಕಾಳ ತರಹತ್ತಿದರು. ಒಳೆ ಭಿಡೆ ಖರ್ಚಮಾಡಿ, ಸಿಕ್ಕ ತಂಟ್ಟಿ ಕಾಳ ತಂದು ತಿನಹತ್ತಿದರು. ದುಡದರ ತಿನಲಿಕ್ಕೆ ಸಿಗುವವರು ಉಪವಾಸ ಬೀಳಹತ್ತಿದರು. ರಾಮೋಶ್ಯಾರ ಬವಣೆ ಅಂತೂ ಕೇಳಾವನ ಇದ್ದಿಲ್ಲ, ಎರಡೆರಡ ದಿನ ಮನ್ಯಾಗಿನ ಒಲೀನ ಹೊತ್ತತಿದ್ದಿಲ್ಲ. ಗರಡಿಮನಿಗೆ ಬರೋ ಹುಡುಗರು ದೂರ ಕಾಳ ತರಲಿಕ್ಕೆ ಹೋಗತಿದ್ದರು. ಸಾಲಿಗೆ ಬರೋ ಹುಡುಗರು ಸುತ್ತಲಿನ ಹಳ್ಳಿಗೆ ರೊಟ್ಟಿ ಬೇಡಲಿಕ್ಕೆ ಹೋಗತಿದ್ದರು.

ಇಡೀ ಜಿಲ್ಹಾದಾಗ ಬರಗಾಲ ತಾಂಡವವಾಡುತಿತ್ತು. ಮಾಣದೇಶದ ತುಂಬಾ ಬರಗಾಲನ ಬರಗಾಲ.

ಜನ ನಿರಾಶರಾಗಿ ಅಸಹಾಯರಾದರು. ರಾಮಾ ಕುರುಬನ ಮಾರಿ ಕಪ್ಪಾಗಿತ್ತು. ಈಗ ಅವ ಸಾಲಿಕಡೆಗೆ ದಿನ ಹಾಯಂತಿರಲಿಲ್ಲ. ನಾಲ್ಕಾರು ದಿನದ ಮ್ಯಾಲೆ ಬಂದರೂ ಬರಗಾಲದ ಮಾತ ಮಾತು. ಎರಡನೆ ವಿಷಯ ಮಾತಾಡಲಿಕ್ಕೆ ಇದ್ದಿಲ್ಲ.

ಈ ಮಾತ ಬಂದಾಗ ಅವ ಅಂದ,

"ಇದರದೊಂದ ಹೀಂಗ ಕಥಿ ಐತಿ. ರಾಮ-ಲಕ್ಷ್ಮಣ ದೇವರು, ದೇವರು ಅಂತ ಅನಕೊತ ಹೊಂಟಿದ್ದರು. ಹೊಂಟಾಗ ನಮ್ಮ ಭಾಗದಾಗ ಬಂದರಂತ. ರಾಮಘಾಟದ ಹತ್ತರ ಇಬ್ಬರೂ ಬಂದಾಗ ಅವರಿಗೆ ಹಸಿವೆ ಆತು. ನೆಳ್ಳು ನೋಡಿ ಊಟಕ್ಕ ಕೂತರು. ಅಷ್ಟರಾಗ ಮಳಿ ಬಂತು. ಅವರ ಅನ್ನ ತೊಯಿಲಿಕ್ಕೆ ಹತ್ತಿತು. ಆಗ ರಾಮ ಸಿಟ್ಟಿಗೆದ್ದನಂತ. ಒಂದು ಬಾಣ ಹೊಡೆದು ಮಳಿನ್ನ ಬಾಲೆಘಾಟ ಕಡಿಗೆ ಓಡಿಸಿದನಂತ. ಆವಾಗಿಂದ ಹಿಡದು ಇವತ್ತಿನ ತನಕಾನೂ ಈ ಮಾಣದೇಶದಾಗ ಮಳಿ ಇಲ್ಲ. ನೀವ ನೋಡರಿ. ರಾಮಘಾಟಕ್ಕ ಮಳಿ ಬೀಳತದ. ತಮ್ಮ ತಲಿಮ್ಯಾಗಿಂವ ಕಪ್ಪೋಗಾದ ಮೋಡ ತೇಲಿ ಹಾರಿಹೋಗೇ ಹೋಗತವ. ಬಾಲೆಘಾಟದಗ ಮಳಿ ಸುರವತಾವ. ನಮಂಗ ಒಂದು ಹನೀನೂ ಇಲ್ಲ."

ಈ ಮಾತು ನಿಜವೇ ಆಗಿತ್ತು. ಈ ನಡುವಿನ ಪಟ್ಟಿಮ್ಯಾಲೆ ವರುಣನ ಕೃಪಾ ಇರಲಿಲ್ಲ.

ತಿನಲಿಕ್ಕೆ ಸಿಗದ್ಹಾಂಗ ಆಗಿ ಕುರಿ ಸೊರಗಿದ್ದವು. ಅನೇಕ ರೋಗಗಳು ಬರತಾ ಇದ್ದವು. ಸಿಡಂಬು ರೋಗ ಹತ್ತಿ ಮಂಖಿದ ಮ್ಯಾಲೆ ಎಲ್ಲಾ ಕಲೆಬಿದ್ದವು. ಜ್ವರ ಬಂದು ಬಿದ್ದಲ್ಲೆ ಬಿದ್ದಿರತಿದ್ದವು. ಗತಿ ಇಲ್ಲದ ಅತಲಾಗ ಇತಲಾಗ ನೋಡತಿದ್ದವು. ಕೆಲವು ಕುರಿಗೆ ಹುಚ್ಚ ಹಿಡೀತು. ಆವು ಗಿಮಿಗಿಮಿ ತಿರುಗಿತಿರುಗಿ ಸತ್ತಬೀಳತಿದ್ದವು. ಕೆಲವು ಕುರಿಗಳಿಗೆ ಕಾಲಬ್ಯಾನಿ ತಗಲಿತು. ಕೆಂಪು ಹಕ್ಕಿ ಬೆನ್ನಮ್ಯಾಲೇ ಕೂತದ್ದರಿಂದ ಕಾಲಬ್ಯಾನಿ ಬಂತಂತ ಕೆಲವರು ಅನತಿದ್ದರು. ಮೂಗಿನ ರೋಗ ಕೆಲವು ಕುರಿಗಳಿಗೆ ತಾಗಿ ಮೂಗ ಹರಿಯಹತ್ತಿದವು. ಕಾಗಿ ಬಂದಬಂದು ಕುರಿ ಕುಕ್ಕತಿದ್ದವು, ಕೆಲವು ಕುರಿಗೆ ಜೊಲ್ಲ ಸೋರೂ ರೋಗ ಹತ್ತಿದರ, ಇನ್ನ ಕೆಲವಕ್ಕ ಕಾಲು ಕೊಳೆಯುವ ರೋಗ ಬಂತು.

ಇಷ್ಟ ರೋಗ ಬಂದರೂ ಕುರಿ ಏನು ಬಹಳ ಸಾಯಲಿಲ್ಲ. ಆದರೆ ಅತಿಸಾರ ಹತ್ತಿದ ಹಿಂಡಿನ್ಯಾಗ ಮಾತ್ರ ಕುರಿ ಪಟಾಪಟಾ ಸಾಯಂತಿದ್ದವು.

ಹೆಚ್ಚಾಗಿ ಬೀರಾನ ಹಿಂಡಿಗೆ ಈ ರೋಗ ಬಡೀತು. ಕೂತಲ್ಲೆ ಕುರಿಗೆ ಜುಲಾಬ ಆಗಿ, ದಡ್ಡಿ ಎಲ್ಲ ರಾಡಿ ಆತು. ಅದರಿಂದ ಕುರಿಗಳ ಮೈಯೆಲ್ಲ ಹೊಲಸಾಗಿ ಮೈತುಂಬ ನೊಣ ಮುಕ್ಕರಿದವು. ದಿನಾ ಎಂಟು ಹತ್ತು ಕುರಿ ಸಾಯಹತ್ತಿದವು. ಅವನ ಮಗ ದಿನಾ ಈ ಹೆಣ ಒಯ್ದು ಹೊರಗ ಒಗೆಯುವ. ಹೀಂಗಾಗಿ ಚರ್ಮದ ಬೆಲಿ ಕಡಿಮೆ ಆತು. ಸುತ್ತಲಿನ ಹಳ್ಳಿ ಒಲೆಯರು ನಾಕೆಂಟು ಆಣೆ ಕೊಟ್ಟು ಚರ್ಮ ತಗೊಂಡ

ಹೋಗತಿದ್ದರು. ಮೊದಲ ಮೊದಲ ಊರ ಹೊಲೆಯರ ಸತ್ತ ಕುರಿ ಒಯತಿದ್ದರು. ಆದರ ಈ ಹೊಲಸ ನೋಡಿ ಅವರೂ ಬೇಸರಪಟ್ಟರು. ಚರ್ಮ ಸುಲಿಯಂದ ಕುರಿ ಹೆಣ ಹಾಂಗ ಅಡವ್ಯಾಗ ಬೀಳಲಿಕ್ಕೆ ಹತ್ತಿದವು. ಎಲ್ಲೆಲ್ಲಿಂದ ರಣಹದ್ದು ಬಂದವು. ಮೊದಲು ನಾಯಿ ಹದ್ದು ಮಾಂಸ ತಿನಲಿಕ್ಕೆ ಬಡತಾಡತಿದ್ದವು. ನಾಯಿ ರಣಹದ್ದನ್ನು ಓಡಿಸತಿದ್ದವು. ಆದರ ಮುಂದ ಅವು ಇವೂ ಕೂಡೆ ಮಾಂಸ ತಿನಲಿಕ್ಕೆ ಹತ್ತಿದವು. ವಾಡೀ ಹತ್ತರ ರಣಹದ್ದು ಬೀಡಾರನ ಬಿಟ್ಟವು. ಒಂದು ಆಲದ ಗಿಡದ ಮ್ಯಾಲೆ ರಾತ್ರಿ ಎಲ್ಲ ಕೂತು ಹೇತು ಗಿಡ ಬೆಳ್ಳಗ ಮಾಡಿದ್ದವು.

ಎಂಟ ದಿನದಾಗ ಬೀರಾನ ಹಿಂಡ ಖಲಾಸ ಆತು. ಬೀರಾ ನಶೀಬನ ಕೆಟ್ಟ ಅಂದ. ದೇವರಿಗೆ ಬೇಡಿಕೊಂಡ. ಆವನಿಗೆ ಪ್ರಾಣಸಂಕಟವಾಯಿತು. ಕಣ್ಣೆದುರಿಗೆ ಗತಿಕಾಣದ ಕುರಿ ಸತ್ತುಹೋದುವಲ್ಲ ಅಂದು ಅತ್ತನು. ಆದರ ಆದದ್ದು ಆಗಿ ಹೋಯಿತು. ಕುರುಬರ ಬೀರಾನ ಮನಿ ಕಥೀನ ಮುಗಿತು. ಹಿಂಡು ಪೂರಾ ನಾಶವಾಗಿ ಹೋಯಿತು.

ಜನ ಉಪವಾಸ ಬೀಳತಾ ಇದ್ದರು. ಇದ್ದದ್ದು ಬಿದ್ದದ್ದು ಮಾರಿ, ದನಕ್ಕ ಮೇವು ತಂದ ಹಾಕತಾ ಇದ್ದರು. ತಮ್ಮ ಹೊಟ್ಟಿಗೆ ಕಡಿಮೆ ಮಾಡಿಯಾದರೂ ದನಗಳಿಗೆ ಹಾಕತಾ ಇದ್ದರು. ಮುಂದಮುಂದ ಯಾವ ಆಟಾನೂ ಸಾಗದ್ಹಾಂಗ ಆತು. ಹಸಿವಿಯಿಂದ ಕಸಿವಿಸಿಯಾಗೊ ದನ ನೋಡೋದು ಆಗುವಲ್ಲದು.

ರಾಮೋಶಿಯರು ತಲೆತಲಾಂತರ ಭಟ್ಟಿ ಶರೆ ಮಾಡಾವರು. ಅದ ಅವರ ಉದ್ಯೋಗ, ಆದರ ಅವರಿಗೂ ಈಗ ಗ್ರಾಹಕರಿಲ್ಲದಂತಾತು. ಗಟ್ಟುಳ್ಳ ಜಗನ್ಯಾ ಕೂಳ ಸಿಗದ್ಹಾಂಗ ಶರೇನ ಕೂಡಿಲಿಕ್ಕೆ ಹತ್ತಿದ್ದ. ಅದರಿಂದ ಅವ ಸೊರಗಿ ಎಲುಬಿನ ಹಂದರ ಆದ, ಕೂಳಿಲ್ಲ ಅಂತ ಬ್ಯಾಸರಾಗಿ ಹನ್ನೆರಡು ಮೈಲು ದೂರಿದ್ದ ಮಹೂದ ಎಂಬ ಊರಿಗೆ ಹೋದ, ಅವನ್ಹಾಂಗ ಅನೇಕರು ಊರಬಿಟ್ಟು ಗೂಳೆಕಾರರಾಗಿ ಅಲ್ಲಿಗೆ ಹೋಗಿದ್ದರು. ಗೂಳೆಕಾರರು ಯಾವಾಗ ಕಿತಕೊಂಡು ಹೋದಾರು ಅನ್ನೊ ಖಾತ್ರಿ ಇಲ್ಲದ್ದಕ್ಕ, ಆ ಊರವರು ಮೂರು ದಿವಸ ಕೆಲಸ ಮಾಡಿದ ಮ್ಯಾಲೆ ಕೂಲಿ ಕೊಡತಿದ್ದರು, ಗೂಳೆಕಾರರೂ ಮೂರು ಮೂರು ದಿನ ದುಡದ ಕೂಲಿಕೇಳತಿದ್ದರು. ಜಗನ್ಯಾ ಹೊಟ್ಟಿಗೆ ಧೋತರ ಕಟ್ಟಿ, ಮೂರದಿನ ಹಸಿದ ಹೊಟ್ಟಿಲೇ ಕೆಲಸ ಮಾಡಿದ. ಮೂರನೆ ದಿನ ಭವಳಿ ಬಿದ್ದವ ತಿರಗಿ ಏಳಲೇ ಇಲ್ಲ.

ಶೇಕೂನ ಎತ್ತು ಹಸಿದು ಮುದಂಕ ಆಗಿತ್ತು. ಅದನ್ನ ಜಗ್ಗೊತ್ತ ಶೇಕು ಹೊರಟಿದ್ದ. ಹಾದ್ಯಾಗ ನನಗ ಭೆಟ್ಟಿ ಆದ.

ನಾ ಕೇಳಿದೆ,

"ಏನು ಶೇಕಂಬಾ, ಯಾತಲಾಗ ಹೊರಟಿ?"

ಶೇಕು ನಿಂತ. ಅವ ಅಂದ,

"ಮಾಸ್ತರ, ನನ್ನ ಕಥಿ ಮುಗಿದೈತಿ. ಸಂತ್ಯಾಗ ಯತ್ತ ಮಾರಾಕ ಹೊಂಟೇನಿ. ಹೋದಲ್ಲೆ ಮೇವಾರ ಕಂಡೀತು."

ಅವ ಹೋಗಿ ಸಂಜೆಗೆ ದಣಿದು ತಿರಗಿ ಬಂದ. ಯತ್ತೂ ಅವನ ಸಂಗತಿಲೆ ಇತ್ತು.

ಹೆಂಡತಿ ಹಾದಿಕಾಯುಂತ್ತ ಕೂತಿದ್ದಳು. ಯತ್ತು ನೋಡಿ ಅಂದಳು,

"ಯಾಕ, ಯತ್ತ ಮಾರಲಿಲ್ಲ?"

"ತಗೊಳ್ಳವಾರ ದಿಕ್ಕಿಲ್ಲ. ಕಟಕರಾವ ಎಂಟು ರೂಪಾಯಿಕ್ಕ ಕೇಳಿದಾ. ಅವನ ಚೂರಿಗೆ ಬಿದ್ದು ಸಾಯೋದಕಿಂತ, ನಮ್ಮ ಬಾಗಲದಾಗ ಉಪವಾಸ ಬಿದ್ದು ಸಾಯೋದ ನೆಟ್ಟಗ !"

ಕುರಿ ಮಾರಿ ಊರವರು ದೂರದೂರದ ಸಂತಿಗೆ ಹೋಗಿ ಕಾಳ ತರಲಿಕ್ಕ ಹತ್ತಿದರು. ನಾಲ್ಕು ಕುರಿ ಮಾರಿದಾಗ ನಾಲ್ಕು ಚಿಟ್ಟಿ ಜೋಳ ಸಿಗತಿತ್ತು. ಆದರ ಜೋಳದ ನುಚ್ಚು ಗಂಟಲ ತಳಗ ಇಳಿತಿರಲಿಲ್ಲ. ಮೊದಲ ಹೋದವರ ಕುರಿ ಮಾರಾಟ ಆದವು. ಹಿಂದಾಗಡೆ ಹೋದವರು ಕೈಬೀಸಿಕೊತ ಬಂದರು. ಸಂತ್ಯಾಗ ದನ ಕುರಿ ತಗೊಳ್ಳವರ ದಿಕ್ಕಿದ್ದಿಲ್ಲ. ತಗೊಳ್ಳವನರ ಏನ ತಿನಲಿಕ್ಕೆ ಹಾಕಾವ ಇದ್ದ?

ಆನಂದನೂ ತೀರ ಸೊರಗಿದ್ದ. ಒಂದು ದಿನ ಬಂದು ಅಂದ,

"ಮಾಸ್ತರ, ಬದಕಾಕ ಎಲ್ಲ್ಯಾರ ಹೋಗತಿನಿ."

ಮಾಸ್ತರಾರ ಏನ ಹೇಳಾವ?

"ಎಲ್ಲಿ ಹೋಗತಿ?"

"ಹಾದಿ ಒಯ್ದಲ್ಲೆ ಹೋಗತೇನಿ. ಬೆಳಿ ನೀರು ಇದ್ದಲ್ಲೆ ಹೋಗತೇನಿ. ಬದುಕಿ ಉಳಿದರ ಬರತೇನಿ."

ಸ್ವಲ್ಪ ಹೊತ್ತು ನಿಂತ ಅಂದ,

"ಮಾಸ್ತರ, ಬಾಲಟ್ಯಾಗ ಹೊಡೆದವರು ನಾನು ಮತ್ತ ಆಯುಬೂ. ನಿಮಂಗ ಅಳತಿ ಇಲ್ಲದ ಕಾಡಾಕ ಹತ್ತಿದ್ಧ, ಅದಕ ಬಡದವಿ."

"ಏನ ಹೇಳತೀದಿ?"

"ನನ್ನಾಣಿ !"

"ಮತ್ತ ಆಯುಬೂ ನನ್ನ ಕೋಣ್ಯಾಗ ಮಲಗಿದ್ದನಲ್ಲ ಆ ರಾತ್ರಿ."

"ಹೊಡದ ಬಂದು, ಸುಮ್ಮನ್ನ ಬಿದ್ದಿದ್ದ."

"ಹೂಂ ऽ ऽ ऽ ऽ"

ಇಷ್ಟೆ ಹೇಳಿ ಆನಂದ ಹೋದ,

ಮನಿ ಕದ ಹಾಕಿ ಎಲ್ಲ ರಾಮೋಶ್ಯಾರು ಊರಬಿಟ್ಟು ಹೊರಬಿದ್ದರು. ಹತ್ತಿಪ್ಪತ್ತು ಜನ ಗಂಟ ಕಟಗೊಂಡು ಹಿಂದ ನೋಡಕೊತ, ಬದುಕಲಿಕ್ಕೆ ಅಂತ ಊರ ಬಿಟ್ಟ ಹೋದರು. ಅವರವರ ಕುರಿ ಬೆನ್ನಹತ್ತಿದ್ದವು. ಹೆಗಲಮ್ಯಾಲೆ, ಕಂಕುಳದಾಗ ಮಕ್ಕಳಿದ್ದವು. ಹೆಂಗಸರೂ ಮುದಕರೂ—ಅವರ ಸಂಗಡ ಹೋದರು. ಕುಂಚಿಕೊಕ್ರರು ತಮ್ಮ ಇಡೀ ಸಂಸಾರ ಹೊತಗೊಂಡು ಅಡ್ಡ್ಯಾಡವರಂತೆ, ಈ ರಾಮೋಶ್ಯಾರು ಧೂಳಾದ ರಸ್ತೆ ತುಳಕೊತ ಕೂಳ ಹುಡುಕಲಿಕ್ಕೆ ಹೊಂಟರು. ವಾಡ್ಯಾಗಿನ ರಾಮೋಶಿ ಓಣಿ ಬರಿದಾಯಿತು.

ಆಮ್ಯಾಲೆ ಕುರುಬರು ತಮ್ಮ ಹಿಂಡು ಕಟಕೊಂಡು ಹೊರಬಿದ್ದರು. ಅವರ ಜೋಡಿ ಕೂದಲಿದ್ದ ನಾಯೀನ ಬೆನ್ನಹತ್ತಿದವು. ಕುರಿಮ್ಯಾಲೆ ಅವಲಂಬಿಸಿದ್ದ ಯುವಕರು, ಅವೂ ಸತ್ತ ಮ್ಯಾಲ ದಿಕ್ಕುಕಾಣದೆ, ಮನಸು ಗಟ್ಟಿಮಾಡಿ ಊರ ಬಿಟ್ಟರು. ಅದರ ಬೆನ್ನುಹತ್ತಿ ಅವರವರ ಮನಿಯವರೂ ಹೋದರು. ಎಷ್ಟೆ ದೂರಿರಲಿ ಬರಗಾಲ ಪ್ರದೇಶ ದಾಟಿಹೋಗಬೇಕೆಂದು ಕುರುಬರು ನಿರ್ಧರಿಸಿದ್ದರು. ಸಾಧ್ಯವಿದ್ದಷ್ಟು ಸಾಮಾನ ಹೊತಗೊಂಡು ಹೋಗಿದ್ದರು. ಬೆಂ ಬೆಂ ಅನಕೊತ ಕುರಿ ಬೆನ್ನಹತ್ತಿದವು. ದಣಿದ ಮರಿ ಹೆಗಲಮ್ಯಾಲೆ ತಗೊಂಡೂ ಹೊಂಟಿದ್ದರು. ಹೀಂಗ ನಡೀತು ಈ ಪಾದಯಾತ್ರೆ!

ರಾಮಾ ಬನಗರ ಊರ ಬಿಡೋದಕಿಂತ ಮೊದಲ ಗಡಿಬಿಡಿಲೆ ನನಗ ಭೆಟ್ಟಿ ಯಾಗಲು ಬಂದು ಅಂದ, "ಧೂಳೆ–ಮೋರ್ಚಾಪೂರ ಕಡೆ ಹೋಗತೀನಿ. ನಮ್ಮ ಬೀಗರ ಅದಾರ ಅಲ್ಲಿ. ಮುದಕ ಬರುದಿಲ್ಲ ಅಂತಾನ. ನೀವ ಅವನ್ನ ಸಂಭಾಳಸಿರಿ!" ಕಾಕೂಬಾ ಹೋಗಲಿಲ್ಲ. ಊರಾಗ ಉಳದ. ಮಗ ಎಷ್ಟೆ ಹೇಳಿದರೂ ಕೇಳಲಿಲ್ಲ. ಕಾಕೂಬಾ ಅಂದ,

"ನಾ ಯಾಕ ಬರಲಿ? ನೀವು ಹೊಂಟಿರಲ್ಲ ಕುರಿ ತಗೊಂಡು. ಅವನ್ನ ಬದಕಸರಿ. ನಂದೇನು ಉಳಿದದ ಇನ್ನ? ಕಷ್ಟಬಟ್ಟು ಬದುಕಬೇಕು ಅನ್ನುವಂಥ ಪರಿಸ್ಥಿತೀನೂ ಇಲ್ಲ. ನೀವು ಹೋಗರಿ. ನನ್ನ ಧಡ ಇಲ್ಲೆ ಬೀಳೋದು."

ರಾಮಾ ಕಾಳಿನ ವ್ಯವಸ್ಥಾ ಮಾಡಿದ. ಮುದಕಗ ಅಡಿಗಿ ಮಾಡಲಿಕ್ಕೆ ಅಂತ ಹೆಂಡತಿನ ಬಿಟ್ಟಹೋದ. ಅವ ಕುರಿ ತಗೊಂಡ ಹೊರಟಾಗ ಮುದಕ ಅಂದ,

"ಎಲ್ಲ ಕುರಿ ಒಯ್ದರ ನಾ ಏನಮಾಡಲಿ? ಎರಡು ಕುರಿ ಇಟ್ಟ ಹೋಗು. ನನ್ನ ರೊಟ್ಯಾಗಿನ ಎರಡು ತುಣುಕ ಹಾಕಿ ಬದಕಸತೇನಿ. ಏನೂ ನಡೆಯುದ್ಹಾಂಗ ಆದರ ಎಲ್ಲಾರೂ ಕೂಡೆ ಸಾಯತೇವಿ." ಎರಡು ಕುರಿ ಬಿಟ್ಟು ರಾಮು ಹೋದ. ಅವನ ಜೋಡಿ ಅವನ ಮಗನೂ ಹೋದ.

ಎಲ್ಲಾ ಮನಿ ಖಾಲಿ ಆದವು. ಒಬ್ಬೊಬ್ಬರಾಗಿ ಎಲ್ಲಾರೂ ಹೋಗಿಬಿಟ್ಟರು. ಅಳದ, ಒದರಾಡ್ಯದ ಹೊರಟುಹೋದರು.

ಕೆಲವು ಒಕ್ಕಲಿಗರು ಉಳಿದರು. ಅವರ ಹತ್ತರ ಇನ್ನೂ ತಿಂಗಳ ಎರಡಂ ತಿಂಗಳ ಕಾಳಿನ ಸಂಗ್ರಹ ಇತ್ತು. ಅದೂ ತೀರಿದ ಮ್ಯಾಲೆ ಅವರೂ ಊರಬಿಟ್ಟರು. ಬಾಳಾ ಕುರುಬ ಹೋದ. ಶೇಕು ಅವನ ಹೆಂಡತಿ ಯತ್ತ ತಗೊಂಡು ಹೋದರು. ಧೂಳಾ ಹೋದ, ಉಳಿದ ರೈತರು ತಮ್ಮತಮ್ಮ ಮನಿಗೆ ಕೀಲಹಾಕಿ ಹೋದರು. ಬಾಳಾ ಬನಗರನ ಹೆಗಲಮ್ಯಾಲೆ ಕೂತು ಬಾಲಟ್ಯಾನೂ ಹೋದ. ಹೋಗಹೋಗತ ಸಾಲಿ ಹತ್ತರ ನಿಂತು ಒದರಿ ಅಂದ,

"ಮಾಸ್ತರಾ, ನಾ ಹೊರಟೆ. ಉಳಿದು ಬಂದರ ಮಾತ್ರ ನಿನ್ನ ನೋಡಕೊತೇನಿ. ನೀನ ನನ್ನ ಎಲುಬು ಮುರಿಸದಾವ ಅಂತ ಪಕ್ಕಾ ತಿಳಿದೈತಿ ನನಗ!"

ದಿನಾ ಮುಂಜಾನೆ ಮತ್ತು ಸಂಜೆನ್ಯಾಗ ಸಾವಿರಾರ ಕುರಿ ಗದ್ದಲ ಇರತಿತ್ತು. ಕುರಿ ಕಾಯೂವರು ಬರಾವರು ಹೋಗವರು. ಅವರೆಲ್ಲರೂ ಹೋದರು. ಊರ ಭಣಭಣ ಅಂತಿತ್ತು, ಸಂಜೆಗೆ ಮರಿ ಇದ್ದ ಕುರಿ ದನಿ ಕೇಳಸದ್ಹಾಂಗ ಆತು. ವಾಡೀ ಮೂಕ ಆತು. ಕುರಿ ಉಚ್ಚಿ ಓಕ್ಕಿ ನಾತ ಇಲ್ಲದ್ಹಾಂಗ ಆತು, ಗುಡಿಸಲದಾಗಿಂದ ಹೊಗೆ ಬರೋದು ಬಂದಾತು. ಸಾಲಿ ಮುಂದ ಕೂಡೊ ಸಭಾ ಮುಗಿತು. ವಾಡೀ ನಿಷ್ಪ್ರಾಣವಾಯಿತು; ಜೀವ ಇಲ್ಲದ್ಹಾಂಗ ಆತು. ನೀರು ಹೋತು, ಮಳಿ ಹೋತು, ವಾಡೀ ಖಲಾಸ ಆತು. ಆ ರಾಮು, ಆ ಶೇಕು, ಆ ಆನಂದಾ, ಆ ಬಾಲಟ್ಯಾ, ಆ ಬಾಳಾ—ಎಲ್ಲರೂ ಇಲ್ಲದ್ಹಾಂಗ ಆದರು. ಚಲೊ ಇದ್ದವರೂ, ಕೆಟ್ಟ ಇದ್ದವರೂ ಎಲ್ಲಾರೂ ಹೋದರು. ಸಾಲಿ ಉಳೀತು, ಗರಡಿಮನಿ ಉಳೀತು, ಆ ಮನಿ, ಆ ಗುಡಿಸಲ, ಗಿಡಗಂಟಿ ಇದ್ದಲ್ಲೆ ಉಳದವು, ಜನ ಮಾತ್ರ ಹೋದರು!

ದೆವ್ವನ ಗಾಳಿ ಬೀಸಹತ್ತಿತು. ಮನಿ, ಸಾಲಿ, ಗರಡಿಮನಿ, ಗುಡಿಸಲ, ಸಾರಿಸಿದ ಅಂಗಳ ಎಲ್ಲ ಧೂಳಿಯಿಂದ ತುಂಬಿದವು. ಕುರುಬರ ಅಚ್ಚುಕಟ್ಟಾಗಿ ಸಾರಿಸಿದ ಅಂಗಳ ದಾಗ ಕಸಕಡ್ಡಿ ಧೂಳಿ ಬಂದು ಬಿತ್ತು. ಛಪ್ಪರಕ್ಕ ಹಾಕಿದ ತೊಗರಿ ಕಟಿಗಿ ಅಸ್ತಾವ್ಯಸ್ತ ಆದವು. ತೂತು ಬಿದ್ದಲ್ಲೆಲ್ಲ ಗಾಳಿಯು ವಿಚಿತ್ರದನಿ ಕೇಳಿಸತಿತ್ತು. ಛಪ್ಪರ ಮೇಲಿಟ್ಟ ರಂಟೆಕುಂಟಿ ನೇಗಿಲ ಕೆಳಗ ಬಿದ್ದದ್ದರ ಸಪ್ಪಳ ಕೇಳಿಸಿತು.

ಮುಚ್ಚಿದ ಬಾಗಲ ಮ್ಯಾಲ ಗಾಳಿ ಬಡದ ಬಡಿತಿತ್ತು. ಬಾಗಿಲ ಧಡಧಡ, ಫಡಫಡ ಅಂತ ಸಪ್ಪಳಮಾಡತಿದ್ದವು. ಗರಡಿಮನ್ಯಾಗ ಎಲ್ಲ ಧೂಳ ಆಗಿತ್ತು. ಕುಸ್ತಿ ಕಣದಾಗಿನ ಕೆಂಪು ಮಣ್ಣಿನ ಮ್ಯಾಲೆ ಧೂಳಿಥರ ಕೂತಿತ್ತು. ಜಾಡರಹುಳ ಎಲ್ಲಕಡೆ ತಮ್ಮ ಬಲೆ ನೇಯ್ದಿದ್ದವು. ಹನಮಂತದೇವರ ಗುಡ್ಯಾಗೂ ಬರೀ ಧೂಳ. ಕೆಂಪ ಹನಮಂತನ ಮೈನೂ ಧೂಳ ಆಗಿತ್ತು.

ಊರಾಗ ಜನ ಕಾಣದ್ಹಾಂಗ ಆತು. ಬೇವಿನ ಗಿಡದ ಮ್ಯಾಲೆ ಬಂದ ಕೂಡೊ ಬೆಳ್ಳಕ್ಕಿನೂ ಕಾಣದಾಂಗ ಆದವು. ಸಾಲಿತುಂಬ ಚಿಂವಚಿಂವ ಅಂತ ಹಾರಾಡೊ ಗುಬ್ಬಿ

ಎಲ್ಲಿ ಹೋದವೋ ಏನೋ? ಬೆಕ್ಕು ಮಾತ್ರ ಅತಲಾಗ ಇತಲಾಗ ಅಡ್ಡಾಡತಿದ್ದವು. ರಾತ್ರಿ ಗುರ‍್ರಮ್ಯಾಂವ, ಗುರ‍್ರಮ್ಯಾಂವ ಅಂತ ಕಡದಾಡತಿದ್ದವು. ಮುಚ್ಚಿದ ಮನ್ಯಾಗ ಹೋಗಿ ಇಲಿಬ್ಯಾಟಿ ಆಡತಿದ್ದವು.

ಕಾಕೂಬಾನ ಎರಡು ಕುರಿ ಹಿಂಡಿನಿಂದ ಬ್ಯಾರೆ ಆದ್ದರಿಂದ ರಾತ್ರಿ ಎಲ್ಲ 'ಬ್ಯಾಂ ಬ್ಯಾಂ' ಅಂತ ಒದರತಿದ್ದವು. ತೋಳ ದಿಟ್ಟವಾಗಿ ಊರಾಗ ಅಡ್ಯಾಡಲಿಕ್ಕೆ ಹತ್ತಿದ್ದವು. ಅವರ ಕಾಲು ಗರಡಿಮನಿ ಧೂಳ್ಯಾಗ ಮೂಡಿದ್ದು ಕಾಣತಿದ್ದವು. ಗುಂಡ್ಯಾಗಿನ ಧೂಳ್ಯಾಗೂ ಕಾಣತಿದ್ದವು.

ಎರಡೂ ಕುರಿ ತಗೊಂಡು ಕಾಕೂಬಾ ಅಡವಿಗೆ ಮುಂಜಾನೆ ಹೋಗಾವ. ಹಸಿದ ಕುರಿ ಬಿಸಿಲಾಗ ಓಡ್ಯಾಡತಿದ್ದವು. ಅಡವ್ಯಾಗ ಅವಕ್ಕ ತಿನಲಿಕ್ಕ ಏನೂ ಉಳಿದದ್ದೇ ಇಲ್ಲ. ಹಿಂಡಿನಿಂದ ಬ್ಯಾರೆ ಆದ್ದರಿಂದ ಮಾರಿ ಒಣಗಿಸಿ ಒದರತಿದ್ದವು, ಆಗ ಕಾಕೂಬಾ ಅವನ್ನ ಮಾತಾಡಿಸಾವ. ಹೊಲದಾಗಿನ ಹುಲ್ಲಿನ ಬೇರು ಕಿತಕೊಂಡು ಧೋತರದಾಗ ಹಾಕ್ಕೊಂಡು ಬರಾವ. ರಾತ್ರಿ ಅವನ್ನ ಕುರಿಮುಂದ ಹಾಕಾವ. ದಿನ ಇಡೀ ಬೇರು ಹುಡುಕೂದ ಅವನ ಕೆಲಸವಾಗಿತ್ತು. ಕುರಿ ಅವನ ಬೆನ್ನಹಿಂದ ಒದರಿಕೊತ ಇರತಿದ್ದವು. ಸಂಜಿಮುಂದ ಕುರಿ ಹೊಡಕೊತ ತಿರುಗಿ ಬರತಿದ್ದ.

ರಾಮುನ ಹೆಂಡತಿ ಕಚ್ಯಾಗ ಕುಡಗೋಲು ಸಿಗಿಸಿ ಮುಂಜಾನೆ ಹೊರಗ ಹೋಗೊ ವಾಕಿ, ತಲಿಮ್ಯಾಲೆ ಬುಟ್ಟಿ ಇರತಿತ್ತು. ಎರಡನೇ ಊರ ತೋಟ ಕಂಡು ಒಂದೆರಡು ಗಜ್ಜರಿ, ಒಂದೆರಡು ಉಳ್ಳಾಗಡ್ಡಿ ಬುಟ್ಯಾಗ ಹಾಕ್ಕೊಂಡು ಸಂಜೆಗೆ ತಿರುಗಿ ಬರತಿದ್ದಳು. ಒಲಿಗಂತ ಕಟಿಗಿ ತರತಿದ್ದಳು. ಅಲ್ಲೆ ಇಲ್ಲೆ ಬಿದ್ದ ಹೊಟ್ಟು ಬುಟ್ಯಾಗ ಹಾಕ್ಕೊಂಡು ಬರತಿದ್ದಳು. ಅಲ್ಲೆ ಇಲ್ಲೆ ಏನಾರ ಬೇಡಿಕೊಂಡು ಬರತಿದ್ದಳು. ರಾತ್ರಿ ಒಲಿಹೊತ್ತಿಸಿ ಮುಂದಂಕಗ ಏನಾರ ಮಾಡಿಕೊಡತಿದ್ದಳು, ತಾನೂ ತಿನತಿದ್ದಳು, ಕಾಕೂಬಾನ ಗುಡಿಸಲದಾಗಿಂದ ಅಷ್ಟ ಹೊಗಿ ಬರತಿತ್ತು. ಯಾವಾಗರ ಮಾತು ಕೇಳಿಸತಿತ್ತು.

ನಾನೂ ನಡನಡವ ಊರಿಗೆ ಹೋಗತಿದ್ದೆ. ಇದ್ದ ಸಂಗತಿ ಸರಕಾರಕ್ಕ ತಿಳಿಸತಾ ಇದ್ದೆ. ವಾರದಾಗ ಎರಡು ಮೂರು ದಿನ ವಾಡ್ಯಾಗ ಇರತಿದ್ದೆ. ಆಯುಬೂ ನಾನು ಇಬ್ಬರ ಊರಾಗ ಇದ್ದೆವು. ಮೊಣಕಾಲ ಮ್ಯಾಲೆ ಕೈಯೂರಿ ಆಯುಬೂ ಎಲ್ಯಾರ ಕೂಡತಿದ್ದ. ಅನಸಿದರ ಸಾಲಿ ಕಸ, ಗರಡಿಮನಿ ಕಸ ಹೊಡಿತಿದ್ದ. ನಾ ನಿದ್ದೀ ಮಾಡೇ ಕಾಲಹರಣ ಮಾಡತಾ ಇದ್ದೆ. ಯಾವಾಗರ ಬರಿತಿದ್ದೆ, ಓದತಿದ್ದೆ. ಒಮ್ಮೊಮ್ಮೆ ನನಗ ಹೇಳದ ಕೇಳದ ಆಯುಬೂ ಹೋಗಿಬಿಡಾವ, ಪಾದ ಎಲ್ಲ ಧೂಳಿ ಆಗಿ, ದಣಿದು ಸಂಜಿಮುಂದ ಬರಾವ. ಯಲ್ಲಿ ಹೋಗಿದ್ದಿ ಅಂತ ಕೇಳಿದರ ಕಾಲು ಸಡಲುಮಾಡಲಿಕ್ಕೆ ಹೋಗಿದ್ದೆ, ಅಂತ ಹೇಳಾವ.

ಹಗಲು ಹ್ಯಾಂಗಾರ ಹೋಗತಿತ್ತು. ರಾತ್ರಿ ಆದರ ಮಾತ್ರ ಸಂಕಟ ಅನಿಸತಿತ್ತು.

ರಾತ್ರಿ ನಮ್ಮನ್ನ ನುಂಗತದೇನೋ ಅಂತ ಅನಿಸತಿತ್ತು. ಯಾವಾಗರ ರಾತ್ರಿ ಕಾಕೂಬಾ ಬರಾವ, ಗೋಡಿಗೆ ಆತು ಕೂಡಾವ, ಕೊಣ್ಯಾಗ ಚಿಮಣಿ ಬೆಳಕ ಬೆಳಕು ಮಂದ ವಾಗಿರತಿತ್ತು. ನಾ ನನ್ನ ವಿಚಾರದಾಗ ಇರತಿದ್ದೆ, ಆಯುಬೂ ತನ್ನ ಚಿಂತ್ಯಾಗ ಇರತಿದ್ದ. ಕಾಕೂಬಾ ಅತಲಾಗ ಇತಲಾಗ ನೋಡಕೊತ ವ್ಯಾಳ್ಯಾ ಕಳಿತಿದ್ದ. ಮೂರಮಂದಿ ಮೂರಕಡೆಗೆ ಕೂತಿರತಿದ್ದೆವಿ.

"ಏನು ಕಾಕೂಬಾ, ರಾಮುನ ಸುದ್ದಿ ಬಂದ್ಯೆತಿ ಏನು?"

"ಏನಿಲ್ಲರಿ."

"ಹೋದವರು ಎಂದ ತಿರುಗಿ ಬರಾವರು?"

"ಮಳಿಬಿದ್ದು ನೀರು ಬಂದಮ್ಯಾಲೆ!"

ಹೀಂಗ ನಮ್ಮ ಪ್ರಶ್ನೋತರ ನಡಿತಿದ್ದವು. ಇಲ್ಲದಿದ್ದರ ಮುಂದಂಕ ಸುಮ್ಮನ ಕೂಡಾವ, ಎದ್ದು ಹೋಗಾವ.

ನಾ ಮನಿಯಿಂದ ತಂದ ತಂಗಳರೊಟ್ಟಿ ಆಯುಬೂಗ ಕೊಟ್ಟರ, ಒಮ್ಮೊಮ್ಮಿ ತಗೊತಿದ್ದ; ಒಮ್ಮೊಮ್ಮಿ ಬ್ಯಾಡ ಅಂತಿದ್ದ. ಬಹಳ ಆಗ್ರಹ ಮಾಡಿದರ ಹೊರಗ ಎದ್ದ ಹೋಗಾವ. ನಾ ಒಬ್ಬನ ಒಣರೊಟ್ಟಿ ತಿಂದು ನೀರು ಕುಡಿದು ಮಲಕೊತಿದ್ದೆ.

ಕೆಲದಿನ ಹೀಂಗ ಉರುಳಿವವು. ವಾಡೀ ಸಾಲಿ ಕಿಲೀಹಾಕಿ ತಾಲೂಕಿನ ಪ್ರಾಯ ಮರಿ ಸಾಲಿಗೆ ಹೋಗಿ ಹಾಜರ ಆಗಲಿಕ್ಕೆ ನನಗ ಹುಕುಮು ಬಂದಿತು.

ಆಯುಬೂ ನನ್ನ ಸಾಮಾನ ಕಟ್ಟಿದ, ನಾ ಇದ್ದ ಮನಿ ಖಾಲಿ ಮಾಡಿದೆ, ಸಾಲಿಗೆ ಕಿಲೀ ಹಾಕಿದೆ. ಹೋಗೊಮುಂದ ಗಡಿಬಿಡಿಲೆ ಕಾಕೂಬಾನ ಮನಿಗೆ ಹೋದೆ. "ನನ್ನ ಬದಲಿ ಆಗ್ಯದ, ನಾ ಹೋಗತೇನಿ" ಅಂದೆ. ಕಾಕೂಬಾ ದಿಟ್ಟಿಸಿ ನನ್ನ ನೋಡಿದ. ಹೂಂ ಅಂತ ಗೋಣ ಅಗಳಾಡಿಸಿದ—ಎರಡು ಮೂರು ಸಾರೆ ಅಗಳಾಡಿಸಿ ಅಂದ, "ಒಳ್ಳೇದು!"

ಮುದಕ ಹೆಚ್ಚು ಏನೂ ಮಾತಾಡಲಿಲ್ಲ. ಅವನ ಸೊಸೀನೂ ಏನೂ ಮಾತಾಡ ಲಿಲ್ಲ. ಹೊಸ ಮನಷ್ಯಾನ ಕಂಡು ಕುರಿ ಒಂದೆರಡು ಸಲ ಒದರಿದವು. ಕಾಕೂಬಾಗ ಹೇಳಿ ನಾ ಹೊರಟೆ.

ಮನಷ್ಯಾರು ಇಲ್ಲ, ದನ ಇಲ್ಲ, ಊರಾಗ ಯಾರೂ ಕಾಣತಾ ಇಲ್ಲ. ವಾಡೀಕಡೆ ಬೆನ್ನಮಾಡಿ ಚಕ್ಕಡಿ ದಾರೀಲೆ ತಿರುಗಿ ಹೊರಟೆ. ಸಾಮಾನದ ಗಂಟು ತಲಿಮ್ಯಾಲೆ ಹೊತಗೊಂಡು ಆಯುಬೂ ನನ್ನ ಹಿಂದ ಬರತಿದ್ದ. ನನ್ನ ಕೈಯಾಗೂ ಕೆಲವು ಸಾಮಾನ ಇದ್ದವು.

ನಡುವ ಆಯುಬೂ ನಿಂತು, ತಲಿಮ್ಯಾಲಿನ ಗಂಟು ಸರಿಮಾಡಿ ನನ್ನಕಡೆ ನೋಡದವ ಅಂದ, "ಗಂಟ ನಿಮ್ಮ ಮಂದ್ಯಾಗ ಒಗದ ನಾನು ತಿರುಗಿ ಹೋಗತೇನಿ."

ಎಲ್ಲಿ ಹೋಗತೇನಿ, ಏನ ಮಾಡಾವ ಇದ್ದೇನಿ ಇದನ್ನೇನೂ ಅವ ಹೇಳಲಿಲ್ಲ. ಪಾಪ, ಇವಗ ಯಾರ ಆಧಾರ ಸಿಕ್ಕೀತು ಎಂಬ ವಿಚಾರ ನನ್ನ ತಲ್ಯಾಗನೂ ಬರಲಿಲ್ಲ. ನನ್ನ ನೆರಳು ಹಾಂಗ ಮುಂದಕ ಮುಂದಕ ಸರೀತಿತ್ತು. ಕಾಲಾಗ ಧೂಳ ಹಾರತಿತ್ತು. ದೂರ ಪಸರಿಸಿದ ಬೈಲಿನ್ಯಾಗ ಯಾರೂ ಕಾಣತಿದ್ದಿಲ್ಲ. ನಿರ್ಜನವಾದ ಬನಗರವಾಡಿ ಹಿಂದುಳಿದಿತ್ತು, ಮತ್ತು ನಾನು......ತಿರಂಗಿ ಹೊರಟಿದ್ದೆ.